

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

★ ಸಂಪುಟ ೮೦, ೨೦೦೨ ಸಂಚಿಕೆ-೧

ಸಂಪಾದಕರು

■ ಡಾ. ಚಕ್ಕೆರೆ ಶಿವಶಂಕರ ■ ಪ್ರೊ|| ಜಿ. ಅಬ್ದುಲ್ ಬಷೀರ್

ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

## ವಿನಿಮಯಕ್ಕೆ ಬರುತ್ತಿರುವ ಪತ್ರಿಕೆಗಳು

**ದಿನ ಪತ್ರಿಕೆ:**

೧. ಬಯಲು ಸೀಮೆ ೨. ಸರ್ವೋದಯ ೩. ರಾಯಚೂರು ವಾಣಿ ೪. ಸಂದರ್ಶನ

**ವಾರಪತ್ರಿಕೆ:**

೧. ಅರ್ಥವಿಕಾಸ ೨. ಅಂಚೆವಾರ್ತೆ ೩. ಕನ್ನಡಿಗ ೪. ಕರ್ನಾಟಕ ರಾಜ್ಯಪತ್ರ ೫. ಕಾನಡಾ ವೃತ್ತ ೬. ಜನಜೀವಾಳ ೭. ನಾಗರಿಕ ೮. ಪ್ರಪಂಚ ೯. ಬೆಳಕು ೧೦. ಸಂದೇಶ ೧೧. ಸನ್ಮಾರ್ಗ ೧೨. ಕಿತ್ತಳೆ ನಾಡು ೧೩. ಕುರುಕ್ಷೇತ್ರ ೧೪. ನುಡಿಜೇನು ೧೫. ಬ್ರಹ್ಮಗಿರಿ ೧೬. ಕನ್ನಡ ತಿಲಕ ೧೭. ಅಂಕುಶ ೧೮. ಓದುಗರ ವೇದಿಕೆ ೧೯. ಓಟ್ ಫಾರ್ ಸಿಟಿ ೨೦) ಜ್ವಾಲಾಮುಖಿ.

**ಪಕ್ಷಪತ್ರಿಕೆ :**

೧. ದಾಸೋಹ ಜ್ಞಾನರತ್ನಾ ೨. ಬಹುಜನ ಕನ್ನಡಿಗರು ೩. ರಾಜ್ಯಪ್ರಗತಿ.

**ಮಾಸಪತ್ರಿಕೆ :**

೧. ಅಭಿಮತ ೨. ಅಸೀಮ ೩. ಆತ್ಮಧರ್ಮ ೪. ಆರೋಗ್ಯ ಸಂಪತ್ತು ೫. ಕಲಾದರ್ಶನ ೬. ಕರ್ನಾಟಕ ವಿಕಾಸ ೭. ಕನ್ನಡ ಕಣ್ಮಣಿ ೮. ಗಾಂದಿಬಜಾರ್ ೯. ಗುರುದೇವ ೧೦. ಜೀವನ ಶಿಕ್ಷಣ ೧೧. ಥಿಯಾಸಫಿ ಸಂದೇಶ ೧೨. ದಿವ್ಯಜ್ಯೋತಿ ೧೩. ದೆಹಲಿ ಕನ್ನಡಿಗ ೧೪. ಧರ್ಮಪ್ರಭ ೧೫. ನೇಸರು ೧೬. ಪರಂಜ್ಯೋತಿ ೧೭. ಪತ್ರಪುಷ್ಪ ೧೮. ರಂಗತೋರಣ ೧೯. ಯುಗಪುರುಷ ೨೦. ಯೋಜನಾ ೨೧. ವೇದಪ್ರಕಾಶ ೨೨. ವೈದ್ಯತರಂಗಿಣಿ ೨೩. ವಿನೋದ ೨೪. ವೇದತರಂಗ ೨೫. ಸಪ್ತಗಿರಿ ೨೬. ಸದ್ಬೋಧ ಚಂದ್ರಿಕೆ ೨೭. ಸಿದ್ಧಗಂಗಾ ೨೮. ಸುಶೀಲ ೨೯. ಸ್ಫೂರ್ತಿ ೩೦. ಅಚಲ ಭಾರತ ದರ್ಶನ ೩೧. ಸಂಬಂಧ ೩೨. ಸಮಾಚಾರ ೩೩. ಬೆಳ್ಳಿಮೋಡ ೩೪. ಪರಿಮಳ ೩೫. ಅಕ್ಷಯ ೩೬. ಛಂದಃಸ್ಮೃತಿ ೩೭. NBT Letters ೩೮. March of Karnataka ೩೯. Vidya Bhavana Prasanga Bizz Byzz. ೪೦. ದಿಕ್ಸೂಚಿ ೪೧. ಬುಲಟಿನ್ ೪೨. ಹೊಸತು ೪೩. ಗ್ರಾಮಾಂತರ ಶಕ್ತಿ ೪೪. ಬೋಧ ಭಾರತ ೪೫. ಅನಂತ ಪ್ರಕಾಶ ೪೬. ಸಿರಿ ಸಮೃದ್ಧಿ ೪೭. ಪ್ರಕೃತಿ ಜೀವನ ೪೮. ಯುವಕರ್ನಾಟಕ ೪೯. ಯಕ್ಷಪ್ರಭಾ ೫೦. ಮಹಾಮನೆ ೫೧. ವಿಜ್ಞಾನ ಸಂಗಾತಿ ೫೨. ಉತ್ಥಾನ ೫೩. ಶಾಂತಿ ಕಿರಣ ೫೪. ಜಂಗಮ ಬೆಳಗು ೫೫. Journal of th Film Chamber.

**ವಿಶೇಷ ಸಂಚಿಕೆಗಳು:**

೧. ವಿನೋದ (೫೦ನೇ ವಾರ್ಷಿಕ ಸಂಚಿಕೆ) ೨. ಕೆಂಬಾವುಟ ೩. ಯುಗಪುರುಷ ೪. ಅಸೀಮಾ ೫. ಜನಜೀವಾಳ ೬. ಸನ್ಮಾರ್ಗ ೭. ಹಸಿರುಕ್ರಾಂತಿ ೮. ಅನನ್ಯ ೯. ಉತ್ಥಾನ ೧೦. ಹೊಸತು.

**ಹಿಂದಿ ಪತ್ರಿಕೆಗಳು :**

೧. ಹಿಂದಿ ಪ್ರಚಾರವಾಣಿ ೨. ಸಾಹಿತ್ಯ ಅಮೃತ್ ೩. ಸಂದೇಶ್

**ಕನ್ನಡ ದ್ವೈಮಾಸಿಕ**

೧. ಸಂಶೋಧನ ವ್ಯಾಸಂಗ ೨. ಶಾಂತಿಕಿರಣ ೩. ಶಿವದುಂದುಭಿ.

**ಕನ್ನಡ ತ್ರೈಮಾಸಿಕ**

೧. ಸದ್ಧರ್ಮ ಪ್ರಭ ೨. ತರಳಬಾಳು ೩. ಶಂಕರ ಭಾಸ್ಕರ ೪. ಜಶಿರಾ ೫. ಸ್ನೇಹ ಚಿಂತನ.



# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

★ ಸಂಪುಟ ೮೦, ೨೦೦೨
ಸಂಚಿಕೆ ೧

ಸಂಪಾದಕರು

★ ಡಾ. ಚಕ್ಕೆರೆ ಶಿವಶಂಕರ್ ★ ಪ್ರೊ. ಜಿ. ಅಬ್ದುಲ್ ಬಷೀರ್

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು-೫೬೦ ೦೧೮

*KANNADA SAHITYA PARISHAT PATRIKE* -
Kannada Literary and Research Journal of Kannada Sahitya Parishat.
Edited by : ***Dr. Chakkere Shivashankar and***
***Prof. G. Abdul Basheer*** . Published by : ***Kannada Sahitya Parishat***
Pampa Mahakavi Road Chamarajpet Bangalore -560 018

Pages : 102 + VI

Vol No. 80, Issue No.1 2002



| | |
|---|---|
| Annual Subscription | : Rs. 30/- |
| Single issue | : Rs. 10/- |
| ವಾರ್ಷಿಕ ಚಂದಾ | : ರೂ. ೩೦/- |
| ಬಿಡಿ ಸಂಚಿಕೆ | : ರೂ. ೧೦/- |

ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮

# ಅಧ್ಯಕ್ಷರ ಮಾತು

ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಭಾಷೆ, ಸಂಸ್ಕೃತಿ, ನಾಡು–ನುಡಿಯ ಸಂರಕ್ಷಣೆ, ಸಂವರ್ಧನೆಗಾಗಿ ಶ್ರಮಿಸುತ್ತಿರುವ ಏಕೈಕ ಸಂಸ್ಥೆ. ಸುಮಾರು ೮೭ ವರ್ಷಗಳ ದೀರ್ಘಕಾಲದ ಇತಿಹಾಸವನ್ನು ಹೊಂದಿರುವ ಪರಿಷತ್ತು ಅನೇಕ ರೀತಿಗಳಲ್ಲಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದೆ. ಅವುಗಳಲ್ಲಿ ಅತ್ಯುತ್ತಮ ಸಾಹಿತ್ಯ ಕೃತಿಗಳ ಪ್ರಕಟಣ ಕಾರ್ಯ ಪ್ರಧಾನವಾದುದಾಗಿದೆ. ಈ ಹಿಂದಿನ ಹಲವಾರು ಮಹನೀಯರ ಪ್ರಯತ್ನದ ಫಲವಾಗಿ ಸುಮಾರು ೧೦೦೦ಕ್ಕೂ ಹೆಚ್ಚು ಕೃತಿಗಳನ್ನು ಪರಿಷತ್ತು ಹೊರತಂದಿದೆ. ಈ ಕೃತಿಗಳು ಸಾಹಿತ್ಯ ಕ್ಷೇತ್ರದ ಎಲ್ಲ ಪ್ರಕಾರಗಳಿಗೂ ಸಂಬಂಧಿಸಿವೆ. ಕನ್ನಡ ಜನತೆಗೆ ಉತ್ತಮ ಸಾಹಿತ್ಯವನ್ನು ನೀಡುವ ಸಲುವಾಗಿ ಅತ್ಯಂತ ಸುಲಭ ಬೆಲೆಯಲ್ಲಿ ಈ ಪುಸ್ತಕಗಳನ್ನು ಒದಗಿಸಲಾಗಿದೆ. ಸಾಹಿತ್ಯಾಭಿಮಾನಿಗಳ ವಾಚನಾಭಿರುಚಿಯನ್ನು ಬೆಳೆಸುವುದರ ಮೂಲಕ ಜ್ಞಾನಪ್ರಸಾರ ಮಾಡುವುದು ನಮ್ಮ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿದೆ.

ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ೮೦ನೆಯ ಸಂಪುಟದ ಮೊದಲನೆಯ ಸಂಚಿಕೆಯನ್ನು ಸಕಾಲದಲ್ಲಿ ಕರ್ನಾಟಕದ ಸಾಹಿತ್ಯಾಭಿಮಾನಿಗಳ ಮುಂದಿಡಲು ಹರ್ಷವಾಗುತ್ತಿದೆ. ಈ ಪತ್ರಿಕೆ ತ್ರೈಮಾಸಿಕವಾಗಿ ಹೊರಬರುತ್ತಿರುವುದು ಮತ್ತೊಂದು ಸಂತೋಷದ ಸಂಗತಿಯಾಗಿದೆ. ಪತ್ರಿಕೆಯ ಗಾತ್ರವನ್ನೂ ಹೆಚ್ಚುಮಾಡಲಾಗಿದೆ. ಕನ್ನಡ ಭಾಷೆ, ಸಾಹಿತ್ಯ ಸಂಶೋಧನೆ, ಸಂಸ್ಕೃತಿಗಳಿಗೆ ಸಂಬಂಧಿಸಿದ ಮೌಲಿಕವಾದ ಲೇಖನಗಳನ್ನು ಕಳುಹಿಸುತ್ತಿರುವ ಲೇಖಕರಿಗೆ ನಾನು ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಇನ್ನು ಮುಂದೆಯೂ ವೈವಿಧ್ಯಪೂರ್ಣ ಲೇಖನಗಳನ್ನು ಪರಿಷತ್ಪತ್ರಿಕೆಗೆ ಕಳುಹಿಸಿಕೊಡುವ ಕೃಪೆ ಮಾಡಬೇಕೆಂದೂ ಲೇಖಕ ಮಿತ್ರರನ್ನು ಕೋರುತ್ತೇನೆ.

ಪರಿಷತ್ಪತ್ರಿಕೆಯ ಅಂದ–ಚೆಂದ, ಗುಣಮಟ್ಟಗಳನ್ನು ಕುರಿತು ಅನೇಕ ಗಣ್ಯಸಾಹಿತಿಗಳು ಮೆಚ್ಚುಗೆಯ ಪತ್ರಗಳನ್ನು ಬರೆದಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ. ಪರಿಷತ್ಪತ್ರಿಕೆ ಸಕಾಲದಲ್ಲಿ ಆಕರ್ಷಕವಾಗಿ ಬರಲು ಶ್ರಮಿಸುತ್ತಿರುವ ಸಂಪಾದಕದ್ವಯರಾದ ಡಾ. ಚಕ್ಕೆರೆ ಶಿವಶಂಕರ್ ಮತ್ತು ಪ್ರೊ. ಜಿ. ಅಬ್ದುಲ್ ಬಷೀರ್ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲಬೇಕು. ಮುಂಬರುವ ದಿನಗಳಲ್ಲಿ ಪರಿಷತ್ಪತ್ರಿಕೆ ತಪ್ಪದೆ ಮೂರು ತಿಂಗಳಿಗೊಮ್ಮೆ ಹೊರಬರಲಿದೆ. ಈ ಪತ್ರಿಕೆಯ ಪ್ರಕಟಣೆಯ ಸಂದರ್ಭದಲ್ಲಿ ಸಹಕರಿಸಿದ ಸಂಚಾಲಕರಾದ ಡಾ. ನಲ್ಲೂರು ಪ್ರಸಾದ್ ಅವರಿಗೂ, ಸಂಪಾದಕ ಮಂಡಳಿಯ ಸದಸ್ಯರಿಗೂ, ಮುದ್ರಣಾಲಯದ ಸಿಬ್ಬಂದಿ ವರ್ಗದವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಬೆಂಗಳೂರು

ಧರ್ಮದರ್ಶಿ ಹರಿಕೃಷ್ಣ ಪುನರೂರು
ಅಧ್ಯಕ್ಷರು

# ಸಂಪಾದಕರ ಮಾತು

ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ೮೦ನೆಯ ಸಂಪುಟದ ಒಂದನೆಯ ಸಂಚಿಕೆಯನ್ನು (ಜನವರಿ–ಮಾರ್ಚ್–೨೦೦೨) ಕನ್ನಡ ಸಾಹಿತ್ಯಾಭಿಮಾನಿಗಳ ಮುಂದಿಡಲು ಆನಂದವಾಗುತ್ತಿದೆ. ಪರಿಷತ್ಪತ್ರಿಕೆಯ ಸಹೃದಯಾಭಿಮಾನಿಗಳ ಸಂಖ್ಯೆಯೂ ಹೆಚ್ಚುತ್ತಿದೆ; ಲೇಖಕ ಬಂಧುಗಳ ಪ್ರೀತಿಯೂ ನಮಗೆ ಲಭಿಸುತ್ತದೆ. ಹೀಗಾಗಿ ೭೯ನೆಯ ಸಂಪುಟದ ಸಂಯುಕ್ತ ಸಂಚಿಕೆ (೧-೪ : ೨೦೦೧) ಯ 'ಸಂಪಾದಕರ ಮಾತಿನಲ್ಲಿ' ನಾವಿಟ್ಟುಕೊಂಡಿದ್ದ ಮಹದಾಸೆ ಹಂತ ಹಂತವಾಗಿ ಈಡೇರುತ್ತಿದೆ. ಕನ್ನಡ ಭಾಷೆ, ಪ್ರಾಚೀನ-ಅರ್ವಾಚೀನ ಗ್ರಾಂಥಿಕ ಕನ್ನಡ ಸಾಹಿತ್ಯ ಮತ್ತು ಜಾನಪದಕ್ಕೆ ಸಂಬಂಧಿಸಿದ ವೈವಿಧ್ಯಪೂರ್ಣ ಲೇಖನಗಳು ಈ ಸಂಚಿಕೆಯಲ್ಲಿವೆ. ಲೇಖನಗಳು ಇಂಥ ವಿಷಯಕ್ಕೇ ಸಂಬಂಧಿಸಿರಬೇಕೆಂಬ ಮಡಿವಂತಿಕೆಯನ್ನು ನಾವಿಟ್ಟುಕೊಂಡಿಲ್ಲ. ಹೀಗಾಗಿ ಲೇಖಕ ಮಿತ್ರರು ತಮ್ಮ ಆಸಕ್ತಿಯ ಕ್ಷೇತ್ರಕ್ಕೆ ಸಂಬಂಧಿಸಿದ ಲೇಖನಗಳನ್ನು ಕಳುಹಿಸಿಕೊಡಬಹುದು.

ಪ್ರಸ್ತುತ ಸಂಚಿಕೆಯ ಲೇಖನಗಳಲ್ಲಿ ಹೊಸ ಚಿಂತನೆಗಳಿವೆ; ಹೊಸ ಹೊಳಹುಗಳಿವೆ. ಸಾಹಿತ್ಯಾಸಕ್ತರು ಈ ಬಗ್ಗೆ ಚರ್ಚೆಯನ್ನು ಪ್ರಾರಂಭಿಸಬಹುದು. ಯಥಾಪ್ರಕಾರ ಇದಕ್ಕೆ ಮುಕ್ತ ಅವಕಾಶವುಂಟು.

ಪರಿಷತ್ಪತ್ರಿಕೆಯ ಸಂಪಾದಕತ್ವದ ಜವಾಬ್ದಾರಿಯನ್ನು ನಮ್ಮಿಬ್ಬರ ಮೇಲೆ ಹೊರಿಸಿದ ಪರಿಷತ್ತಿನ ಪದಾಧಿಕಾರಿಗಳಿಗೂ ಲೇಖನಗಳನ್ನು ಕಳುಹಿಸಿ ಉಪಕರಿಸಿದ ಲೇಖಕ ಮಿತ್ರರಿಗೂ, ಪ್ರಕಟಣ ವಿಭಾಗದ ಮುಖ್ಯಸ್ಥರಾದ ಶ್ರೀ ಎನ್. ಚಕ್ರಪಾಣಿಯವರಿಗೂ ಸಿಬ್ಬಂದಿವರ್ಗಕ್ಕೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಕಳೆದ ಸಂಚಿಕೆಯ ನಂತರದ ಈವರೆಗಿನ ಅವಧಿಯಲ್ಲಿ ಸಾಹಿತ್ಯ ಪ್ರಶಸ್ತಿ, ಸನ್ಮಾನ, ಸ್ಥಾನ, ಗೌರವಗಳನ್ನು ಪಡೆದ ಗಣ್ಯರಿಗೆ ಪರಿಷತ್ಪತ್ರಿಕೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಬೆಂಗಳೂರು — ಡಾ. ಚಕ್ಕೆರೆ ಶಿವಶಂಕರ್, ಪ್ರೊ. ಜಿ. ಅಬ್ದುಲ್ ಬಷೀರ್

# ಪರಿವಿಡಿ

# ಜಾನಪದ ಅಧ್ಯಯನ : ಎರಡು ಹೊಸ ಸಾಧ್ಯತೆಗಳು

ಡಾ.ಟಿ.ಗೋವಿಂದರಾಜು.

ಜಗತ್ತಿನಾದ್ಯಂತ ಜನಪದ ಬದುಕು ಮತ್ತು ಅದರ ಅನೇಕ ಅಭಿವ್ಯಕ್ತಿ ಪ್ರಕಾರಗಳನ್ನು ವಿವಿಧ ನೆಲೆಗಳಲ್ಲಿ ಅಧ್ಯಯನ ಮಾಡುವ ಗಂಭೀರ ಪ್ರಯತ್ನಗಳು ನಡೆದು ಬಂದಿವೆ. ಆ ಮೂಲಕ ಜಾನಪದದ ಸ್ವರೂಪ–ಸತ್ವಗಳನ್ನು ಗ್ರಹಿಸುವ, ನಿರ್ವಚಿಸುವ ಕಾರ್ಯಗಳು ಹಲವು ಸಂದರ್ಭಗಳಲ್ಲಿ ತೃಪ್ತಿಕರವಾಗಿಯೇ ಆಗಿವೆ–ಎಂದು ಹೇಳಿದರೂ ಇನ್ನೂ ಹೆಚ್ಚಿನ, ಮುಂದುವರೆದ ಶೋಧ–ಅಧ್ಯಯನಗಳಿಗೆ ಅವಕಾಶಗಳು ಇದ್ದೇ ಇವೆ–ಎಂಬುದೂ ಜಾನಪದದ ಗಂಭೀರ ಅಧ್ಯಯನಕಾರರಿಗೆ ಸ್ವಯಂ ವೇದ್ಯವಾಗಿದೆ. ಉದಾ. ಗೆ ತಲೆಮಾರಿನಿಂದ ತಲೆಮಾರಿಗೆ ಮೌಖಿಕವಾಗಿ ಹರಿದುಬರುವುದರಿಂದ ಜಾನಪದಕ್ಕೆ ಪ್ರಾಚೀನ ದಾಖಲೆಗಳಿಲ್ಲ. ಆದ್ದರಿಂದ, ಶತಮಾನಗಳ ಹಿಂದಿನ ಜನಪದ ಬದುಕಿನ ರೀತಿ–ನೀತಿಗಳನ್ನು ಗುರುತಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ–ಎಂಬುದು ಜಾನಪದ ವಿದ್ವಾಂಸರ ಸಾಮಾನ್ಯ ನಂಬಿಕೆಯಾಗಿದೆ. ಹಾಗೆಯೇ ವಕ್ತೃಗಳನ್ನು ಸಂದರ್ಶಿಸುವ ಮೂಲಕ ನೇರ ಮಾಹಿತಿ ಸಂಗ್ರಹವೂ ಜಾನಪದ ಅಧ್ಯಯನಕಾರರಲ್ಲಿ ಸಾಮಾನ್ಯವಾಗಿರುವ ಕ್ರಮವಾಗಿದೆ.

ಅಂದರೆ, ಜಾನಪದ ಅಧ್ಯಯನದಲ್ಲಿ ಈ ಎರಡೂ 'ಕೊರತೆ'ಯನ್ನೇ ಸೂಚಿಸುತ್ತವೆ. ಇಂತಹ ಕೊರತೆಗಳನ್ನು ತುಂಬಿಕೊಳ್ಳದ ಜಾನಪದ ಅಧ್ಯಯನ ಸಮಗ್ರ, ಸಮೃದ್ಧತೆಯ ಕಡೆಗೆ ಸಾಗಿದಂತಾಗುವುದಿಲ್ಲ. ಈ ಕೊರತೆಗಳು ಅಪರಿಹಾರ್ಯವೆಂದೇನಲ್ಲ. ಕಳೆದ ಹಲವು ವರ್ಷಗಳ ನನ್ನ ವೈವಿಧ್ಯಮಯ ಮಾಹಿತಿ ಸಂಗ್ರಹ ಹಾಗೂ ಅಧ್ಯಯನದ ಸಂದರ್ಭದಲ್ಲಿ ಈ ಎರಡೂ ಅಂಶಗಳನ್ನು ವಿಭಿನ್ನವಾಗಿ, ತೃಪ್ತಿಕರವಾಗಿ ಅಭ್ಯಾಸ ಮಾಡಬಹುದು ಎಂಬುದು ನನಗೆ ಮನವರಿಕೆಯಾಗಿದೆ. ಮತ್ತು ಅಂತಹ ಅನುಭವದ ಹಿನ್ನಲೆಯಲ್ಲಿ ನಾನು ರೂಪಿಸಿಕೊಂಡ ಆ ಎರಡು ಹೊಸ ಸಾಧ್ಯತೆಗಳೇ 'ಪ್ರಾಚ್ಯ ಜಾನಪದೀಯ ಅಧ್ಯಯನ' ಹಾಗೂ 'ಕ್ಯಾಂಡಿಡ್ ಜಾನಪದ'. ಅವುಗಳ ತತ್ವ, ಸ್ವರೂಪಗಳನ್ನು ಕೆಲವೊಂದು ನಿದರ್ಶನಗಳೊಂದಿಗೆ ಸಂಕ್ಷಿಪ್ತವಾಗಿ ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

I. **ಪ್ರಾಚ್ಯಜಾನಪದೀಯ ಅಧ್ಯಯನ :** ಜಾನಪದವು ತೋಂಡಿಯಾಗಿ ಒಬ್ಬರಿಂದೊಬ್ಬರಿಗೆ ಸಂವಹನಗೊಳ್ಳುತ್ತದೆ ಹಾಗೂ ಅದರ ಎಲ್ಲಾ ಅಭಿವ್ಯಕ್ತಿ ರೂಪಗಳನ್ನು ಸವಿವರವಾಗಿ ದಾಖಲಿಸಿಡುವ ಪ್ರಯತ್ನವನ್ನು (ಉದ್ದೇಶಪೂರ್ವಕ) ಜನಪದರು ಮಾಡಲಿಲ್ಲ–ಎಂಬುದು ನಿಜವೇ ಆದರೂ ಈ ಅಭಿಪ್ರಾಯ ಜಾನಪದದ ಎಲ್ಲಾ ಅಂಗಗಳಿಗೂ ಪೂರ್ಣ ಅನ್ವಯವಾಗುವುದಿಲ್ಲ ಎಂಬ ಸೂಕ್ಷ್ಮವನ್ನು ಅಧ್ಯಯನಕಾರರು ಗಮನಿಸಬೇಕಿದೆ. ಅನ್ಯಶಿಸ್ತುಗಳ ಮೂಲಕ ಜಾನಪದದ ಬಹುಮುಖತೆಯನ್ನು ಕುರಿತು ಅಧ್ಯಯನಕ್ಕೆ ತೊಡಗಿದಾಗ ಜಾನಪದಕ್ಕೂ ಅಸಂಖ್ಯ ಪ್ರಾಚೀನ ದಾಖಲೆಗಳಿವೆ, ಪ್ರಪಂಚದಾದ್ಯಂತ ಅಳಿದುಳಿದಿರುವ ಅಂತಹ ಲಭ್ಯ ದಾಖಲೆಗಳ ಮೂಲಕ ಅಂದಂದಿನ ಜನಪದ ಬದುಕನ್ನು ಪುನರ್‌ದರ್ಶಿಸಬಹುದಾಗಿದೆ– ಎಂಬುದು ಅರಿವಾಗುತ್ತದೆ. ಇಂತಹ ನಮ್ಮ ಅಧ್ಯಯನಕ್ಕೆ ಬಳಸಿಕೊಳ್ಳಬಹುದಾದ ಪ್ರಾಚ್ಯ ಆಕರಗಳೆಂದರೆ – ಪುರಾತತ್ವಶೋಧಗಳಲ್ಲಿ ಕಂಡುಬರುವ ವಸತಿ ಮಾದರಿಗಳು, ಸಮಾಧಿಗಳು, ಪಾತ್ರೆ–ಪಡಗ, ಆಯುಧ, ಆಟಿಕೆ,

ಮುದ್ರಿಕೆ, ನಗ–ನಾಣ್ಯಗಳು; ಗುಹಾಚಿತ್ರ, ಭಿತ್ತಿಚಿತ್ರ, ಚಿಕಣಿಚಿತ್ರ ಮೊದಲಾದ ಪ್ರಾಚೀನ ವರ್ಣಚಿತ್ರಗಳು, ಶಿಲ್ಪಗಳು, ಕರಕುಶಲವಸ್ತುಗಳು; ಪ್ರವಾಸೀ ಬರೆಹಗಳು, ಪತ್ರಾಗಾರ ಇಲಾಖೆಯ ವಿವಿಧ ದಾಖಲೆಗಳು; ಶಾಸನ, ನಿಘಂಟು, ಕೋಶಗಳು, ಕೈಫಿಯತ್ತುಗಳು, ಶಾಸ್ತ್ರ–ಸಾಹಿತ್ಯ ಕೃತಿಗಳು; ದಶಕಗಳ ಹಿಂದಿನ ವಿವಾಹ, ನಾಮಕರಣಾದಿ ಶಾಸ್ತ್ರಾಚರಣೆಗಳ ಸಂದರ್ಭದಲ್ಲಿ ತೆಗೆದ ಛಾಯಾಚಿತ್ರ, ವಿಡಿಯೋ ಚಿತ್ರಗಳು . . . ಮೊದಲಾದುವು.

ಈ ದಾಖಲೆಗಳ ಬಳಕೆಯಲ್ಲಿ ಜಾನಪದ ಅಧ್ಯಯನಕಾರ ಅಗತ್ಯವಾಗಿ ಗಮನದಲ್ಲಿಟ್ಟುಕೊಳ್ಳಬೇಕಾದ ಅಂಶಗಳೆಂದರೆ ಆಯಾ ಕ್ಷೇತ್ರದ ತಜ್ಞರು ಶೋಧಿಸಿ ಪ್ರಕಟಿಸಿದ ಮಾಹಿತಿ ದಾಖಲೆಗಳನ್ನು ಮಾತ್ರವೇ ಬಳಸಿಕೊಳ್ಳುವುದರಿಂದ ಜಾನಪದ ಪ್ರಾಚ್ಯ ಅಧ್ಯಯನಕ್ಕೆ ಒಂದು ಅಧಿಕೃತತೆ ಬರಲು ಸಾಧ್ಯವಾಗುತ್ತದೆ. ಏಕೆಂದರೆ ಜಾನಪದ ಅಧ್ಯಯನಕಾರ ಸ್ವತಃ ಎಲ್ಲಾ ಶಿಸ್ತುಗಳಲ್ಲಿಯೂ ತಜ್ಞನಾಗುವುದು ಸುಲಭ ಸಾಧ್ಯವಲ್ಲ. ಆದರೂ ಪ್ರಾಚ್ಯಜಾನಪದವನ್ನು ಕುರಿತು ಅಧ್ಯಯನ ಮಾಡುವವರು ಇತಿಹಾಸ, ಚಿತ್ರ, ಶಿಲ್ಪ, ಛಾಯಾಗ್ರಹಣ, ಪುರಾತತ್ವ, ಮಾನವಶಾಸ್ತ್ರ . . . ಮೊದಲಾದ ಹಲವಾರು ಶಿಸ್ತುಗಳ ಬಗೆಗೆ ಸ್ಥೂಲ ಪರಿಚಯವನ್ನಾದರೂ ಹೊಂದಿದವನಾಗಿರುವುದು ಅತ್ಯಗತ್ಯ. ಇಲ್ಲವಾದರೆ ತನ್ನ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಗಳನ್ನು ಕ್ರೋಢೀಕರಿಸಿಕೊಳ್ಳುವುದೇ ಆತನಿಗೆ ಅಸಾಧ್ಯವಾಗುತ್ತದೆ. ಈ ಎಲ್ಲಾ ಪ್ರಾಚ್ಯದಾಖಲೆಗಳಿಂದ ಜಾನಪದದ ಭೌತಿಕ ಬಗೆಗಳನ್ನು ಹೆಚ್ಚು ಖಚಿತವಾಗಿ ಗಮನಿಸಿ ಅಧ್ಯಯನ ಮಾಡಬಹುದಾಗಿದೆ.

ಜನಪದ ಸಂಸ್ಕೃತಿಯ ಬೆಳವಣಿಗೆಯ ಚಾರಿತ್ರಿಕ ಅಧ್ಯಯನದತ್ತ ಯಾವ ವಿದ್ವಾಂಸರೂ ಗಮನಹರಿಸಿದಂತಿಲ್ಲ. ಇದೊಂದು ಶ್ರಮಪೂರ್ವಕವಾದ ಅಧ್ಯಯನ ಕಾರ್ಯ. ಇನ್ನಾದರೂ ಅಗತ್ಯವಾಗಿ ಆಗಬೇಕಾದುದು. ಗಮನವಿಟ್ಟು ಅಭ್ಯಾಸಮಾಡಿದಲ್ಲಿ ಇಂದಿನ ಜಾನಪದದ ಹಿಂದಿನ ಎಂತೆಂತಹ ಅಪರೂಪದ ಮುಖಗಳ ದರ್ಶನವಾಗುತ್ತದೆ ಎಂಬುದಕ್ಕೆ ಕೆಲ ನಿದರ್ಶನಗಳನ್ನು ನೋಡಬಹುದು.

**ಜನಪದ ವಾದ್ಯಗಳು** : ತಮಟೆ, ಕೊಂಬು, ಕಹಳೆಗಳು ನಮ್ಮಲ್ಲಿ ಸಾಮಾನ್ಯವಾಗಿ ಬಳಕೆಯಾಗುತ್ತಿರುವ ಜನಪದ ವಾದ್ಯಗಳು. ಇವುಗಳ ಮೂಲ ರೂಪ ಹೇಗಿದ್ದಿರಬಹುದು? ಐನೂರು–ಸಾವಿರ ವರ್ಷಗಳ ಹಿಂದೆಯೂ ಈ ವಾದ್ಯಗಳು ಬಳಕೆಯಲ್ಲಿದ್ದವೇ? ಅವುಗಳ ಆಕಾರ ಈಗಿನಂತೆಯೇ ಇದ್ದಿತೇ? ಹಾಗೂ ಅವುಗಳನ್ನು ಈಗಿನಂತೆಯೇ ನುಡಿಸುತ್ತಿದ್ದರೇ? ಇವು ಕೇವಲ ನಮ್ಮ ದೇಶದವರಿಗೇ ಮೀಸಲೋ? ಅಥವಾ ಪಾಶ್ಚಾತ್ಯರಲ್ಲಿಯೂ ಇದ್ದವೋ?! . . . ಇಂತಹ ಸಾಮಾನ್ಯ ಆದರೆ ಕ್ಲಿಷ್ಟ ಪ್ರಶ್ನೆಗಳಿಗೆ ಉತ್ತರಗಳು ಅಗತ್ಯವಿದ್ದರೂ ನಮ್ಮ ಜಾನಪದ ವಿದ್ವಾಂಸರು ಆ ಬಗ್ಗೆ ತಲೆ ಕೆಡಿಸಿಕೊಳ್ಳುವ ಗೋಜಿಗೆ ಹೋದಂತಿಲ್ಲ. ಹಾಗೆಂದು ಕುತೂಹಲಿಗಳು ನಿರಾಶರಾಗಬೇಕಿಲ್ಲ. ಏಕೆಂದರೆ, ಈಗ ಪ್ರಾಚ್ಯಜಾನಪದೀಯ ಅಧ್ಯಯನದಲ್ಲಿ ಅದಕ್ಕೆ ಉತ್ತರನೀಡುತ್ತದೆ. ಅದರ ಪ್ರಕಾರ–'ತಮಟೆ' (ಯಂತಹ ಚರ್ಮ)ವಾದ್ಯ ಕ್ರಿ.ಪೂ. ೩-೪ ಸಹಸ್ರಮಾನಗಳಷ್ಟು ಪ್ರಾಚೀನವಾದುದು; ಆದು ಪಾಶ್ಚಾತ್ಯ ಸಂಸ್ಕೃತಿಗಳಲ್ಲಿಯೂ ಇದ್ದಿತು ಎಂಬುದು ಬ್ಯಾಬಿಲೋನಿಯಾದ ದೇವಸ್ಥಾನವೊಂದರಲ್ಲಿ ದೊರೆತ ಪಾತ್ರೆಯ ಮೇಲಿನ ಚಿತ್ರದಿಂದ ವ್ಯಕ್ತವಾಗುತ್ತದೆ. ಮೆರವಣಿಗೆಯ ಮುಂಭಾಗದಲ್ಲಿ, ಇತರ

ವಾದ್ಯಗಾರರೊಂದಿಗೆ, ಒಬ್ಬಾತ ಇಂತಹ ವಾದ್ಯವನ್ನು ಎಡಗೈಲಿ ಹಿಡಿದು ನುಡಿಸುತ್ತಾ ನಡೆದಿರುವಂತೆ ಅಲ್ಲಿ ಚಿತ್ರಿತವಾಗಿದೆ.

ಪುರಾತನ ಭಾರತದಲ್ಲಿಯೂ ಇಂತಹ ವಾದ್ಯವಿದ್ದ ಬಗೆಗೂ ಸ್ಪಷ್ಟ ದಾಖಲೆಗಳಿವೆ. ಸಾಂಚಿಯ ಉಬ್ಬುಶಿಲ್ಪದಲ್ಲಿನ ಒಂದು ಸನ್ನಿವೇಶ ನಿರೂಪಣೆಯಲ್ಲಿ ಒಬ್ಬಾತ ವಾದ್ಯವೊಂದನ್ನು ತನ್ನ ಹೆಗಲಿಗೆ ಪಟ್ಟಿಯ ಸಹಾಯದಿಂದ ನೇತುಹಾಕಿಕೊಂಡು, ಎದೆಯ ಮೇಲೆ ಎತ್ತಿ ಹಿಡಿದು ನುಡಿಸುತ್ತಿರುವುದು ನಮ್ಮ ಈಗಿನ ತಮ್ಮಟೆಯನ್ನೇ ಹೋಲುತ್ತದೆ. ಸಣ್ಣ ವ್ಯತ್ಯಾಸವೆಂದರೆ ಆತ ತನ್ನ ಬಲಗೈಲಿ ಆ ವಾದ್ಯ ನುಡಿಸಲು ಹಿಡಿದಿರುವ ಕೋಲಿನ ತುದಿ ಕೊಕ್ಕೆಯಂತೆ ಬಾಗಿದೆ. ಎಡ ತೋಳು ವಾದ್ಯದ ಮೇಲುಭಾಗವನ್ನು ಬಳಸಿ ಹಿಡಿದಿದ್ದು, ಎಡಗೈಯ ಬರೀ ಬೆರಳುಗಳಿಂದಲೇ ನುಡಿಸುತ್ತಿರುವಂತಿದೆ.

ಅಮರಾವತಿಯ ಒಂದು ಶಿಲ್ಪದಲ್ಲಂತೂ ಈ ವಾದ್ಯ ಇನ್ನೂ ಸ್ಪಷ್ಟವಾಗಿ ಚಿತ್ರಿತವಾಗಿದೆ. ಸಾಂಚಿಗೂ ಅಮರಾವತಿಗೂ ಆಗಿರಬಹುದಾದ ಒಂದು ಹೋಲಿಕೆ–ವ್ಯತ್ಯಾಸವೆಂದರೆ– ಇಲ್ಲಿಯೂ ವಾದ್ಯಗಾರ ಬಲಗೈಲಿ ಹಿಡಿದಿರುವ ಕೋಲಿನ ತುದಿ ಕೊಕ್ಕೆಯಂತೆ ಬಾಗಿದ್ದರೆ, ಮೇಲೆ–ಎಡಗೈಲಿ ಹಿಡಿದಿರುವ ಕೋಲಿನ ತುದಿ ಬುಗುಟಿನಂತೆ ದುಂಡಗಿದೆ.

ಈ ವಾದ್ಯಕ್ಕೆ ಬ್ಯಾಬಿಲೋನಿಯಾದಲ್ಲಾಗಲೀ, ಸಾಂಚಿ-ಅಮರಾವತಿಯಲ್ಲಾಗಲೀ ಆಯಾ ಕಾಲಗಳಲ್ಲಿ ಯಾವ ಹೆಸರು ಇತ್ತು–ಎಂಬುದು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಕರ್ನಾಟಕದಲ್ಲಿಯೇ ಈಗ ಈ ವಾದ್ಯಕ್ಕೆ ಪ್ರಾದೇಶಿಕವಾಗಿ ಹಲಗೆ, ತಪ್ಪಡೆ ಇತ್ಯಾದಿ ಹೆಸರುಗಳಿರುವುದರಿಂದ, ಪ್ರಸ್ತುತ ಅಧ್ಯಯನದಲ್ಲಿ – ಈ ವಾದ್ಯಕ್ಕೆ ಹಿಂದೆಯೂ ಇದೇ ಹೆಸರೇ ಇತ್ತೇ? ಇಲ್ಲವೇ?– ಎಂಬುದಕ್ಕಿಂತ ವಾದ್ಯ ಸ್ವರೂಪ, ಅದನ್ನು ನುಡಿಸುವ ರೀತಿ ಇತ್ಯಾದಿಗಳಿಗಿರುವ ಹೋಲಿಕೆ–ವ್ಯತ್ಯಾಸಗಳನ್ನು ಗುರುತಿಸುವುದು ಹೆಚ್ಚು ಉಪಯುಕ್ತ. ಈ ದೃಷ್ಟಿಯಿಂದ ಹೇಳುವುದಾದರೆ– ಈ 'ತಮಟೆ' ವಾದ್ಯದ ಆಕಾರದಲ್ಲಿ ಸ್ವರೂಪದಲ್ಲಿ ಹೆಚ್ಚು ವ್ಯತ್ಯಾಸಗಳಾದಂತಿಲ್ಲ. ಅದನ್ನು ಎಡ ಭುಜಕ್ಕೆ ನೇತುಹಾಕಿಕೊಂಡು ಹಿಡಿವ ರೀತಿಯಲ್ಲೂ ವ್ಯತ್ಯಾಸಗಳಿಲ್ಲ. ಆದರೆ, ಕಾಲ ಕ್ರಮೇಣ ಆಗಿರುವ ಬೆಳವಣಿಗೆಗಳೆಂದರೆ ತೀರಾ ಪ್ರಾರಂಭದ ಕಾಲದಲ್ಲಿ ಒಂದುಕೈಲಿ ಮಾತ್ರ ಕಡ್ಡಿ ಹಿಡಿದು ಆ ವಾದ್ಯ ಬಡಿಯುತ್ತಿದ್ದುದು ಮುಂದಿನ ಕಾಲ ಘಟ್ಟದಲ್ಲಿ ಎರಡೂ ಕೈಲಿ ಕಡ್ಡಿ ಹಿಡಿದು ಬಡಿಯುವುದು ಬಂದಿದೆ ಹಾಗೂ ಈ ಕಡ್ಡಿಗಳ ರೂಪದಲ್ಲಿಯೂ ಸ್ವಲ್ಪ ಮಟ್ಟಿಗೆ ಬದಲಾವಣೆಗಳಾಗಿವೆ. ಇಂದು ಬಳಸುತ್ತಿರುವ ಈ ಕಡ್ಡಿಗಳ ತುದಿ ಕೊಕ್ಕೆಯಂತಿರದೆ ನೇರ–ಸಪೂರವಾಗಿಯೇ ಇವೆ. ಮತ್ತು, ಈಗ ಕೆಲವೆಡೆ ಮೇಲೆ ಎಡಗೈಲಿ ಹಿಡಿವ ತೆಳುವಾದ, ನೀಳವಾದ ಕಡ್ಡಿಯನ್ನು 'ಚಕ್ಕೆಕಡ್ಡಿ' ಎಂದೂ, ಕೆಳಗೆ ಬಲಗೈಲಿ ಹಿಡಿವ ದಪ್ಪ–ತುಂಡು ಕಡ್ಡಿಯನ್ನು ಆಕಾರಕ್ಕೆ ಅನ್ವರ್ಥವಾಗಿ 'ದುಂಡುಕಡ್ಡಿ' ಎಂದೂ ಕರೆಯಲಾಗುತ್ತಿದೆ.

ಹೀಗೆಯೇ ನಮ್ಮ ಇತರ ಕೆಲ ಜನಪದ ವಾದ್ಯಗಳನ್ನು (ವಿವರಕ್ಕೆ ಇದೇ ಲೇಖಕರ 'ಕಣ' ಗ್ರಂಥದಲ್ಲಿನ ಪ್ರಾಚ್ಯ ವಾದ್ಯವಿಜ್ಞಾನ ಲೇಖನವನ್ನು ನೋಡಬಹುದು.) ಅಧ್ಯಯನ ಮಾಡಬಹುದು. 'ಜನಪದ ವಾದ್ಯಗಳು ಸಾಕಷ್ಟು ಪ್ರಾಚೀನದವಾಗಿರಬಹುದು'–ಎಂದು

ಯಾರು ಬೇಕಾದರೂ ಸುಲಭವಾಗಿ ಹೇಳಬಹುದಾದರೂ ಅದನ್ನು ಖಚಿತವಾಗಿ ಆಧಾರ ಸಮೇತ ನಿರೂಪಿಸಿದಾಗ ಮಾತ್ರ ನಮ್ಮ ಅಧ್ಯಯನ ವೈಜ್ಞಾನಿಕವೂ ಸುದೃಢವೂ ಆಗುತ್ತದೆ. ಪ್ರಾಚ್ಯಜಾನಪದೀಯ ಅಧ್ಯಯನ ಈ ರೀತಿಯ ಅಭ್ಯಾಸಗಳಿಗೆ ಹೆಚ್ಚಿನ ಒತ್ತು ನೀಡುತ್ತದೆ.

**ಗ್ರಾಮವಿನ್ಯಾಸ, ದನಗಳ ಕೊಟ್ಟಿಗೆ** : ಗ್ರಾಮೀಣ ಜನಪದ ಬದುಕಿನ ಇತರ ಸಾಮಾನ್ಯ ಸಂಗತಿಗಳನ್ನೂ ಲಭ್ಯ ಪ್ರಾಚೀನ ದಾಖಲೆಗಳ ಮೂಲಕ ಹೇಗೆ ಖಚಿತಗೊಳಿಸಿಕೊಳ್ಳಬಹುದೆಂಬುದಕ್ಕೆ ಇನ್ನೊಂದು ನಿದರ್ಶನವನ್ನು ಇಲ್ಲಿ ಗಮನಿಸಬಹುದು: ಇಂದಿನ ನಮ್ಮ ಗ್ರಾಮಗಳು ತಮ್ಮ ಸಾಂಪ್ರದಾಯಿಕ ಸ್ವರೂಪವನ್ನು ಕಳೆದುಕೊಂಡಿವೆ. ಕೆಲ ಅಧ್ಯಯನಕಾರರು ಶಾಸನ ಮೊದಲಾದವುಗಳ ಆಧಾರದಿಂದ ನಮ್ಮ ಪ್ರಾಚೀನ ಗ್ರಾಮಗಳು, ಅವುಗಳ ಸುತ್ತ ಬೇಲಿ, ಹೊಲ ಇತ್ಯಾದಿ ಲಕ್ಷಣಗಳನ್ನು ಹೊಂದಿದ್ದುದರ ಬಗೆಗೆ ಹೇಳುತ್ತಾರೆ. (ನೋಡಿ: 'ಕಣ' ಪು. ೬೩) ಆಗಿನ ಮನೆಗಳ ಮಾದರಿ, ಬೀದಿ, ಬೇಲಿ, ಜನರ ಉಡುಗೆ, ಚಟುವಟಿಕೆಗಳ ನೇರ ದರ್ಶನ ಇಂತಹ ಭಾಷಿಕ ವಿವರಗಳಿಂದ ಆಗುವುದಿಲ್ಲ. ಆದರೆ, ಈ ಕೊರತೆಯನ್ನು ನಾವು ಪ್ರಾಚೀನ ಅಜಂತಾ ವರ್ಣ ಚಿತ್ರಗಳು, ಚಿಕಣಿಚಿತ್ರಗಳಿಂದ ನೀಗಿಕೊಳ್ಳಬಹುದು. ಚಿಕಣಿ ಚಿತ್ರಗಳು ಕೃಷ್ಣನ ಬದುಕನ್ನು ನಿರೂಪಿಸುವ ನೆವದಲ್ಲಿ ಆ ಕಾಲದ ಗ್ರಾಮೀಣ ಬದುಕಿನ ಯಥಾ ದರ್ಶನವನ್ನೂ ಮಾಡಿಸುತ್ತವೆ! ಸು. ೧೮ನೆಯ ಶತಮಾನದ ಅಂತಹ ಒಂದು ಚಿಕಣಿ ಚಿತ್ರದಲ್ಲಿ ಇಳಿಜಾರು ಚಾವಣಿಯ ಮನೆಗಳು, ಮನೆ ಮುಂದಿನ ಅಂಗಳದಲ್ಲಿ ನೂಲುತ್ತಾ ಕೂತ ಒಬ್ಬ ಗೃಹಿಣಿ, ಅವಳ ಎದಿರು ಮರದ ನೆರಳಲ್ಲಿ ಒಂದು ಕೈಗೂಸನ್ನು ಕುಳ್ಳಿರಿಸಿಕೊಂಡು ಲೋಕಾಭಿರಾಮವಾಗಿ ಮಾತಾಡುತ್ತಿರುವ ಇನ್ನೊಬ್ಬ ತಾಯಿ; ವಿವಿಧ ಕೆಲಸಗಳಲ್ಲಿ ತೊಡಗಿದ ಊರ ಗಂಡಸರು, ಹೆಂಗಸರು; ಊರು ಸುತ್ತಾ ಇರುವ ಬೇಲಿ– ಆ ಬೇಲಿ ನಿರ್ಮಿಸಿರುವ ರೀತಿಯೂ ವಿಶೇಷಗಮನಾರ್ಹ–ಅದರಾಚೆ ತೋಪು, ಪಕ್ಕ ಹರಿಯುವ ಕಿರುಹೊಳೆ– ಇತ್ಯಾದಿಗಳು ಅಭ್ಯಾಸದ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ಈ ೨೦೦-೩೦೦ ವರ್ಷಗಳಲ್ಲಿ ನಮ್ಮ ಗ್ರಾಮೀಣ ಬದುಕು–ರೂಪು ತೀರಾ ಬದಲಾಗಿಲ್ಲವೇನೋ ಅನಿಸುತ್ತದೆ. ಹಾಗೆಯೇ, ಇನ್ನೊಂದು ಚಿಕಣಿ ಚಿತ್ರದಲ್ಲಿ ಮನೆಯ ಹೊರಪಕ್ಕದಲ್ಲಿ ದನಗಳ ಕೊಟ್ಟಿಗೆ (ಕೋಣೆ) ಅದರಲ್ಲಿ ದನಗಳನ್ನು ಕಟ್ಟುವ ಗುಜ್ಜು, ಕಣ್ಣು (ಹಗ್ಗ) ಇತ್ಯಾದಿಗಳ ಯಥಾಚಿತ್ರಣವಿದೆ. ಚಿತ್ರದಲ್ಲಿನ ಗುಜ್ಜುಗಳು ಕವೆಯ ಆಕಾರದಲ್ಲಿವೆ ಮತ್ತು ಕಪ್ಪಗಿದ್ದು ಅವು ಜಾಲಿಮರದವು ಇರಬಹುದೆನಿಸುತ್ತವೆ. ದನಗಳನ್ನು ಕಳಚಿ ಆಚೆ ಬಿಟ್ಟಾಗ ಆ ಹಗ್ಗಗಳು ಕಸಕ್ಕೆ ತಾಗದಿರಲೆಂದು ಕವೆಗಳಿಗೆ ನೇತು ಹಾಕಿದ್ದೂ ಕಾಣಬರುತ್ತದೆ. ಸ್ವಾರಸ್ಯವೆಂದರೆ, ನಮ್ಮ ರೈತರು ಕೆಲವೆಡೆ ಈಗಲೂ ಇಂತಹ ಗುಜ್ಜಗಳನ್ನು ಬಳಸುತ್ತಾರೆ. ಮತ್ತು ಕಣ್ಣಿಗಳನ್ನು ಗೊಂತು ಗುಜ್ಜಿಗೆ ಸುತ್ತುವ ನಡವಳಿ ಹೊಂದಿದ್ದಾರೆ. ಹೀಗೆ ಪ್ರಾಚ್ಯ ಜಾನಪದ ಅಧ್ಯಯನವನ್ನು ಮುಂದುವರೆಸಬಹುದಾಗಿದೆ.

**II. ಕ್ಯಾಂಡಿಡ್ ಜಾನಪದ** : ಜನಪದಹಾಡು, ಕತೆ, ಗಾದೆ, ಒಗಟು . . . ಇತ್ಯಾದಿಗಳನ್ನೆಲ್ಲಾ ವಕ್ತೃಗಳಿಂದ ನೇರವಾಗಿ ಕೇಳಿ ಸಂಗ್ರಹಿಸುವುದು ನಮ್ಮ ಅಧ್ಯಯನಕಾರರ ಸಾಮಾನ್ಯ ಕ್ರಮವಾಗಿದೆ. ಕೆಲವೊಂದು ಶಾಸ್ತ್ರ, ಆಚರಣೆಯಂತಹ ನಡವಳಿಗಳನ್ನು ಸ್ವಯಂ

ವೀಕ್ಷಣೆಯ ಮೂಲಕ–ಮಾಹಿತಿ ವಿವರಗಳನ್ನು ಎಲ್ಲರ ಎದುರೇ ದಾಖಲಿಸಿಕೊಳ್ಳಲಾಗುತ್ತದೆ. ಈ ಎರಡೂ ವಿಧಾನಗಳಲ್ಲಿ ನಾವು ಜಾನಪದಕ್ಕೆ ಸಂಬಂಧಿಸಿದ ಸರ್ವವನ್ನೂ ಸಂಗ್ರಹಿಸಲು ಸಾಧ್ಯವೇ? ಈ ಅನುಮಾನ ಏಕೆಂದರೆ–

೧. ಸಂಗ್ರಹಕಾರ ಎದುರಿಗೆ ಕುಳಿತು ಕೇಳಿದ ತಕ್ಷಣವೇ ವಕ್ತೃವಿಗೆ ಹೇಳಬೇಕಾದ ಎಲ್ಲ ಜಾನಪದ ಸಂಗತಿಗಳೂ ನೆನಪಿಗೆ ಬಂದುಬಿಡುವುದಿಲ್ಲ. ಹಲವೊಂದು ಅಂಶಗಳು ಆಯಾ ಸಂದರ್ಭ–ಸನ್ನಿವೇಶಗಳ ಸ್ಫೂರ್ತಿಯಿಂದಾಗಿ ವಕ್ತೃವಿನ ನೆನಪಿನಾಳದಿಂದ ತಾವಾಗಿ ಎದ್ದು ಹೊರಬರುವಂಥದ್ದಾಗಿರುತ್ತವೆ. ಇಲ್ಲವಾದರೆ ಅವು ಅವರ ಸುಪ್ತಜ್ಞಾನ ಭಂಡಾರದಲ್ಲಿಯೇ ಉಳಿದುಬಿಡುತ್ತವೆ.

೨. ತೋಂಡಿಯಾಗಿ ಒಬ್ಬರಿಂದೊಬ್ಬರಿಗೆ ಪ್ರಸಾರವಾಗುವುದರಿಂದ ಜಾನಪದವು 'ಸಾರ್ವಜನಿಕವಾದುದು' ಎಂಬಂತಹ ಅಭಿಪ್ರಾಯ ನಮ್ಮ ವಿದ್ವಾಂಸರಲ್ಲಿ ಸಾಮಾನ್ಯವಾಗಿದೆ. ಆದರೆ, ನನ್ನ ತಿಳಿವಳಿಕೆಯ ಪ್ರಕಾರ ಜಾನಪದ ಎರಡು ಹಂತಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ: ಒಂದು–ಯಾರು ಬೇಕಾದರೂ ಕೇಳುವಂತೆ, ನೋಡುವಂತೆ ಹೇಳುವ, ಪ್ರದರ್ಶಿತವಾಗುವ ಸಾರ್ವಜನಿಕ ಜಾನಪದ'; ಇನ್ನೊಂದು– ನಿರ್ದಿಷ್ಟ ಗುಂಪಿನಲ್ಲಿ ತೀರಾ ಆಂತರಿಕವಾಗಿ ಹೇಳಿಕೊಳ್ಳುವಂಥ 'ಖಾಸಗಿ ಜಾನಪದ'. ಇಂಥಲ್ಲಿ 'ಹೊರಗಿನವ'ರು ಗಮನಿಸುತ್ತಿದ್ದಾರೆ, ಅದನ್ನು ದಾಖಲಿಸುತ್ತಿದ್ದಾರೆ–ಎಂಬುದು ಗೊತ್ತಾದರೆ ಅಲ್ಲಿ ಜಾನಪದ ವಾಚಿಕವಾಗಿಯಾಗಲೀ, ಆಂಗಿಕವಾಗಿಯಾಗಲೀ ಅಭಿವ್ಯಕ್ತಗೊಳ್ಳುವುದೇ ಇಲ್ಲ. ಆಗ ಸಂಗ್ರಾಹಕನಿಗೆ ದಾಖಲಿಸಿಕೊಳ್ಳಲು ಏನೂ ಸಿಗುವುದಿಲ್ಲ.

ಮೇಲಿನ ಈ ಎರಡೂ ಸಂದರ್ಭಗಳಲ್ಲೂ ಅಪರೂಪದ, ಸೂಕ್ಷ್ಮ ಜಾನಪದ ಮಾಹಿತಿಗಳು ಅಭಿವ್ಯಕ್ತಗೊಳ್ಳುವ, ಸಂವಹನಗೊಳ್ಳುವ ಸಂಭವವಿರುವುದರಿಂದ ಸಂಗ್ರಾಹಕ ಇಲ್ಲಿ ತಾನು ಇದ್ದು ಇಲ್ಲದಂತಿದ್ದು ಮಾಹಿತಿ ಹೆಕ್ಕಿಕೊಳ್ಳಬೇಕಾಗುತ್ತದೆ! ಇದೊಂದು ಅತಿಕ್ಲಿಷ್ಟವಾದ, ಜಾಣತನದ ಸಂಗ್ರಹಕಾರ್ಯ. ಮಕ್ಕಳ ಗಮನಕ್ಕೆ ಬಾರದಂತೆ ಅವರ ಚಟುವಟಿಕೆಗಳ ಸಹಜ, ಸುಂದರ ಛಾಯಾಚಿತ್ರವನ್ನು ತೆಗೆದಂತೆ ಈ ಕೆಲಸ. ಛಾಯಾಗ್ರಹಣ ಪರಿಭಾಷೆಯಲ್ಲಿ ಈ ವಿಧಾನವನ್ನು 'ಕ್ಯಾಂಡಿಡ್ ಫೋಟೋಗ್ರಫಿ' ಎಂದು ಕರೆಯಲಾಗುತ್ತದೆ. ಆ ತಾಂತ್ರಿಕ ಶಬ್ದವನ್ನೇ ಬಳಸಿಕೊಂಡು ಜಾನಪದದ ಈ ವಿಭಿನ್ನ ಸಂಗ್ರಹ–ಅಧ್ಯಯನವನ್ನು 'ಕ್ಯಾಂಡಿಡ್ ಜಾನಪದ' (candid folklore) ಎಂದು ಕರೆದಿದ್ದೇನೆ.

ಇನ್ನೊಬ್ಬರ ಮಾತುಗಳನ್ನು ಕದ್ದುಕೇಳುವುದು ಸಜ್ಜನಿಕೆಯಲ್ಲ. ಹಾಗೆಯೇ, ಅವರ ಮಾತುಗಳನ್ನು ದುರುಪಯೋಗಪಡಿಸಿಕೊಳ್ಳುವುದೂ ನಾಗರಿಕ ಲಕ್ಷಣವಲ್ಲ. ಕ್ಯಾಂಡಿಡ್ ಜಾನಪದ ಅಧ್ಯಯನ ಈ ವಿವೇಕದ ಎಚ್ಚರವನ್ನು ಇರಿಸಿಕೊಂಡೇ ನಡೆಯುವಂತಹದ್ದು. ಈ ಅಧ್ಯಯನಕಾರ ಅನ್ಯರ ಯಾವುದೋ ಮಾತಿಗೆ ರಹಸ್ಯವಾಗಿ ಕಾದುಕೂತಿರುವುದಿಲ್ಲ; ಅಕಸ್ಮಾತ್ ತನ್ನ ಅಧ್ಯಯನಕ್ಕೆ ಬೇಕಾದ ಯಾವುದೋ ಸಂಗತಿ ಕಿವಿಗೆ ಬಿದ್ದರೆ ಅದನ್ನು ತನ್ನದನ್ನಾಗಿ ಸ್ವೀಕರಿಸುತ್ತಾನೆ. ಮತ್ತು ಪಾಶ್ಚಾತ್ಯ 'ಪಾಪ್ಪರಜಿ'ಗಳಂತೆ ಇನ್ನೊಬ್ಬರ ಖಾಸಗಿ ಬದುಕನ್ನು ಆತ ಪ್ರವೇಶಿಸಲಾರ. – ಈ ದೃಷ್ಟಿಯಿಂದ ಕ್ಯಾಂಡಿಡ್ ಫೋಕ್‌ಲೋರ್ ಯಾರಿಗೂ ಹಾನಿಮಾಡುವಂತಹದ್ದಲ್ಲ. ಬದಲಿಗೆ, ಸುಪ್ತ ಸಂಸ್ಕೃತಿಯನ್ನು ಶೋಧಿಸಿ ಅರಿವಿನ ಪರಿಧಿಯನ್ನೂ ವಿಸ್ತರಿಸುವಂತಹದ್ದು. ಕಳೆದ ಕೆಲವು ವರ್ಷಗಳಿಂದ ನಡೆದುಬಂದ ನನ್ನ ಅ

ಪ್ರಯತ್ನ ಪೂರ್ವಕ ಪ್ರಯತ್ನಗಳಲ್ಲಿ ನೇರವಾಗಿ ಅಥವಾ ಉದ್ದೇಶಪೂರ್ವಕವಾಗಿ ಸಂಗ್ರಹಿಸಲು ಸಾಧ್ಯವಿರದಿದ್ದ–ಜಾನಪದದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಅನೇಕ ಮಾಹಿತಿಗಳು ನನಗೆ ಲಭ್ಯವಾಗಿವೆ ಎಂದರೆ ಯಾರಿಗಾದರೂ ಅಚ್ಚರಿ ಎನಿಸಬಹುದು. ಕ್ಯಾಂಡಿಡ್ ಜಾನಪದ ಮಹತ್ವವನ್ನು ಮನವರಿಕೆ ಮಾಡಿಕೊಡುವ ಸಲುವಾಗಿ ಅಂತಹ ಕೆಲವೊಂದು ನಿದರ್ಶನಗಳನ್ನು ಇಲ್ಲಿ ನೀಡಬಯಸುತ್ತೇನೆ.

**ಕ್ಯಾಂಡಿಡ್ ಕಳವು ಜಾನಪದ :** ಬೇಟೆ ಜಾನಪದ, ಕಾರ್ಮಿಕ ಜಾನಪದ ಇತ್ಯಾದಿಗಳು ಇದ್ದಂತೆ ಕಳ್ಳರ ಜಾನಪದವೂ ಇರಲೇಬೇಕಲ್ಲವೇ? ಕಳ್ಳರ ಭಾಷೆ, ತಂತ್ರ–ಕೈಚಳಕ ಇತ್ಯಾದಿಗಳಿಗೆ ಸಂಬಂಧಿಸಿದ ಕಳವು ಜಾನಪದದ ಬಗೆಗೆ ನಮ್ಮಲ್ಲಿ ಯಾರೊಬ್ಬರೂ ಈ ವರೆಗೂ ಒಂದು ಟಿಪ್ಪಣಿ–ಲೇಖನವನ್ನಾದರೂ ಪ್ರಕಟಿಸಿಲ್ಲವಲ್ಲ, ಏಕೆ? ಕಾರಣ ಸ್ಪಷ್ಟ: ಕಳ್ಳರು ಅಷ್ಟು ಸುಲಭವಾಗಿ ತಮ್ಮ ರಹಸ್ಯಜ್ಞಾನವನ್ನು ಇತರರಿಗೆ ಬಿಟ್ಟು ಕೊಡುವುದಿಲ್ಲ. ಮಿಗಿಲಾಗಿ ನಮ್ಮ ಅಧ್ಯಯನಕಾರರೂ ಆ ಕಷ್ಟದ ಕಾರ್ಯಕ್ಕೆ ಕೈಹಾಕಹೋಗಿಲ್ಲ. ಆದರೆ, ಜಾನಪದದ ಅಧ್ಯಯನ ವೈವಿಧ್ಯಮಯ, ಸಮಗ್ರ ಆಗಬೇಕಾದರೆ ಆ ಮಾಹಿತಿಯೂ ಇಲ್ಲಿ ಸೇರಲೇಬೇಕು. ಇಂಥಾ ಕ್ಲಿಷ್ಟ ಕಾರ್ಯವನ್ನು 'ಕ್ಯಾಂಡಿಡ್ ಜಾನಪದ' ಜಾಣತನದಿಂದ ಮಾಡಬಲ್ಲುದೆಂಬುದಕ್ಕೆ ಈ ಸ್ವಯಂ ಅನುಭವ ಸಾಕ್ಷಿಯಾಗುತ್ತದೆ: ಹಿಂದಿನ ಸಂಜೆ (೧೬-೭-೨೦೦೦) ಡಾ॥ ಕಲ್ಗುಡಿ ಅವರ ಮನೆಗೆ ಬರುತ್ತೇನೆಂದು ಹೇಳಿದ್ದ ನಾನು ಇಂದಾದರೂ ಸಕಾಲಕ್ಕೆ ಅವರನ್ನು ಕಾಣೋಣವೆಂದು ಹೊರಟರೂ ಮತ್ತೆ ತಡವಾದುದರಿಂದ, ತುರ್ತು ತುರ್ತಾಗಿ ಸಿಕ್ಕಿದ ಬಿ ಟಿ ಎಸ್ ಗಳನ್ನು ಓಡಿ–ಹಿಡಿದು, ಹತ್ತಿ–ಇಳಿದು ನಾಗಪ್ಪ ಪಾರ್ಕ್ ಹತ್ತಿರ ಬಂದೆ. ಅದಾಗಲೇ ಏಳು ಆಗುತ್ತಿತ್ತು . ಓಡುತ್ತಿದ್ದ ಬಸ್ಸು ಏಕೋ ನಿಧಾನವಾಗತೊಡಗಿತು. ನೋಡಿದರೆ ಟ್ರಾಫಿಕ್ಕು ಜಾಮೋಜಾಮು! ಇಳಿದು ನೋಡಿದರೆ ಯಾವುದೋ ಶ್ರೀಮಂತ ಹೆಣದ ಮೆರವಣಿಗೆ. ಅವರ ಸಂಪ್ರದಾಯದಂತೆ ರಸ್ತೆಯುದ್ದಕ್ಕೂ ಪಟಾಕಿ ಸಿಡಿಸುತ್ತಾ, ರಸ್ತೆ ತುಂಬಾ ಗಲೀಜು ಮಾಡುತ್ತಾ ಕಾರು, ಬಸ್ಸು, ಸ್ಕೂಟರು . . . ಎಲ್ಲಿ ಅಡ್ಡಹಾಕಿ ಅವುಗಳಿಂದ ಒತ್ತಾಯ ಪೂರ್ವಕ ಇಂಧನ ಸುಡಿಸುತ್ತ ನಿಧಾನ ತೆವಳುತ್ತಿತ್ತು.

ಕಾದುನಿಂತರೆ ಇನ್ನೂ ತಡವಾಗುತ್ತೆ–ಎಂದು, ನಾನು ಮುಂದೆ ನಿಂತ ಇನ್ನೊಂದು ಬಸ್‌ಗೆ ಓಡಿದೆ. ಅದು ಎರಡು ಹೆಜ್ಜೆ ಉರುಳುವುದರೊಳಗೆ ಮತ್ತೆ ಜಾಮ್ ಆಯಿತು. ಸರಿ, ಅಲ್ಲಿಂದ ಹಾರಿ, ಓಡಿ ಇನ್ನೂ ಮುಂದಿನ ಇನ್ನೊಂದು ಬಸ್ ಏರಿದೆ– (ತಿಂಗಳ ಟಿಕೆಟ್ ಇದ್ದದ್ದರಿಂದ ಚಿಂತೆ ಇಲ್ಲವಲ್ಲ.)

ಆ ಹೊತ್ತಿಗೆ ಬಸ್ ಹರಿಶ್ಚಂದ್ರ ಘಾಟ್ ಬಾಗಿಲಿಗೆ ಬಂದಿತ್ತು. ಟ್ರಾಫಿಕ್ ಕಡಿಮೆ ಆಯಿತು. ಆದರೆ ಬಹಳ ಹೊತ್ತಿನಿಂದ ಕಾದಿದ್ದ ಜನ ಈ ಬಸ್ಸಿಗೇ ಮುಗಿಬಿದ್ದರು. ಬಾಗಿಲಲ್ಲಿ ನಿಲ್ಲಲೂ ಸ್ಥಳವಿಲ್ಲ. ಜತೆಗೆ ಮೈ–ಮನ ಎರಡರಲ್ಲೂ 'ಘಂ' ಎನ್ನುವ ಜನ. ತಿರುಗಲೂ ಆಗದ ಒತ್ತಡದಲ್ಲೂ ಸುರಕ್ಷತೆಗಾಗಿ ನಾನು ಒಂದೆರಡು ಹೆಜ್ಜೆ ಒಳನುಗ್ಗಿದೆ. ಒಬ್ಬರ ಮೈ ಒಬ್ಬರು 'ಬಲವಂತ' ಒತ್ತುತ್ತಿದ್ದರು–ಎಂಬುದನ್ನು ಪ್ರತ್ಯೇಕ ಹೇಳುವಂತಿಲ್ಲ. ಆದರೆ, ಹೇಳಬೇಕಾದುದು–ನನ್ನ ಪ್ಯಾಂಟಿನ ಬಲ ಜೇಬಿನ ಮೇಲೆ ಯಾವುವೋ ಬೆರಳ ತುದಿಗಳು ಸರಿದಾಡುತ್ತಿದ್ದವು! ತಕ್ಷಣ ನನ್ನ ಎಡಕ್ಕೆ ಬೆರಳ ತುದಿಗಳಿಂದ ನಾನು ಸ್ವತಃ

ಜಾಗೃತನಾಗಿರುವುದರ ಸೂಚನೆ ಮುಟ್ಟಿಸಿದೆ. ಅಷ್ಟೇಅಲ್ಲ, ಬಲಗೈಯಿಂದ ನನ್ನ ಹೆಗಲಿಗೆ ಯಾವತ್ತೂ ನೇತುಬಿದ್ದ ಹೆಗಲ ಬ್ಯಾಗನ್ನು ಅವುಚಿ ಹಿಡಿದು, ಎಡಗೈಯಿಂದ ಹಣವಿದ್ದ ಪ್ಯಾಂಟಿನ ಜೇಬನ್ನು ಬಿಗಿಯಾಗಿ ಎಳೆದು ಹಿಡಿದೆ.

ಎದುರಿಗೆ ನಿಂತಿದ್ದ ಕಪ್ಪನೆ, ದಪ್ಪನೆ, ಘಮ್ಮನೆ ವ್ಯಕ್ತಿ ಇಳಿಯಲು ಬಾಗಿಲು ಕಡೆ ಬರುವಂತೆ ನನ್ನ ಕಡೆ ಸರಿದ. ನಾನು ಎಡ ಕಿಡಕಿ ಕಡೆ ತಿರುಗಿ ನೋಡುತ್ತಾ ನಿಂತೆ. ಬಸ್ ಮುಂದುವರೆಯುತ್ತಿದ್ದಂತೆ 'ದಸ್ತು . . . ದಸ್ತು . . .' ಎನ್ನುವ ಸಣ್ಣ ಸದ್ದು ಕೇಳಿಬಂತು. ಆ ದಪ್ಪನೆ ವ್ಯಕ್ತಿಯೇ ಹೇಳಿದಂತಿತ್ತು. ಅದಕ್ಕೆ ಪ್ರತಿಯಾಗಿ ನನ್ನ ಬಲ ಹಿಂಬದಿಯಿಂದ "ಭದ್ರವಾಗಿ ಹಿಡಿಕಂಡ್‌ಬಿಟ್ಟವನೆ" . . . ಎಂಬ ಸ್ವಗತದಂತಹ ಮೆಲುದನಿ ಕೇಳಿಬಂತು.

'ದಸ್ತು . . . ದಸ್ತು . . .' ಎಂದಾಗ ನಾನು ಅದಕ್ಕೆ ಗಮನ ಕೊಟ್ಟಿರದಿದ್ದರೂ, ಈ ಇನ್ನೊಂದು 'ಸ್ವಗತ' ಕೇಳಿದಾಗ ಅದು ನನ್ನ ಜೇಬಿಗೆ ಸಂಬಂಧಿಸಿದ್ದೇ ಎಂಬುದು ಸ್ಪಷ್ಟವಾಯಿತು. ಆದರೆ, ಕತ್ತು ತಿರುಗಿಸಿ ಅವರನ್ನು ನೇರ ನೋಡುವಂತಿರಲಿಲ್ಲ. ಏಕೆಂದರೆ, ಈಗ ನಾನು ಜಾಗೃತನಾಗಿರುವುದು ಅವರಿಗೆ ಪೂರ್ಣ ಗೊತ್ತಾಗದಂತೆ ನಟಿಸಿ, ಅವರ ಮುಂದಿನ ತಂತ್ರ–ಕೈ ಚಳಕಗಳ ಬಗ್ಗೆ study ಮಾಡುವುದಕ್ಕೆ ಇದೊಂದು ಅಪರೂಪದ ಅವಕಾಶವಾಗಿತ್ತು.

ಅಂತೆಯೇ ನಾನು ಜೇಬಿನ ಬಾಯಿ ಸಡಿಲವಾಗದಂತೆ ಕೆಳಭಾಗದಿಂದ ಎಳೆದು ಹಿಡಿದೇ ಇದ್ದೆ. ದಪ್ಪನೆ ವ್ಯಕ್ತಿ ಮತ್ತೆ ನನ್ನತ್ತ ಒತ್ತರಿಸಿದ್ದು ಕಂಡು 'ಸ್ವಲ್ಪ ಜಾಗಬಿಡಿ' ಅಂದೆ. ಆತ ತೀರಾ ಸಲೀಸಾಗಿ 'ಆಕಡೆಯಿಂದ ತಳ್ಳುತ್ತಿದ್ದಾರೆ' ಎಂದ. ವಾದ ಅನವಶ್ಯಕವೆಂದು ನಾನು ಮುಖ ಪಕ್ಕಕ್ಕೆ ತಿರುಗಿಸುತ್ತಿದ್ದಂತೆ ಕೋಡ್‌ವರ್ಡ್‌ಗಳ FM ಪ್ರಸಾರ ಶುರುವಾಯಿತು:

"ದಸ್ತ . . . ದಸ್ತ . . . "

"ಭದ್ರವಾಗಿ ಹಿಡಿದುಬಿಟ್ಟವನೆ . . . ಭದ್ರವಾಗಿ ಹಿಡಿದು ಬಿಟ್ಟವನೆ . . ."

ನನಗೆ ಒಳಗೇ ನಗು. ಆದರೂ ಗಮನಿಸದವನಂತೆ ಮುಂದಿನ ಬೆಳವಣಿಗೆಗಳನ್ನು ನಿರೀಕ್ಷಿಸುತ್ತಿದ್ದೆ. ಸುತ್ತಲಿದ್ದ ಇತರರಿಂದ ಈ ಬಗ್ಗೆ ಏನೂ ಪ್ರತಿಕ್ರಿಯೆ ಇದ್ದಂತಿರಲಿಲ್ಲ. ಆದರೆ, ಆ ಗುಂಪಿನಿಂದ ಮಾತ್ರ ಈ 'ಸ್ಥಳೀಯ ಪ್ರಸಾರ' ಆಗುತ್ತಲೇಇತ್ತು.

ಬಸ್ ಮರಿಯಪ್ಪನಪಾಳ್ಯದ ಹತ್ತಿರ ಬಂದಾಗ ನಾನು ಎಡಗೈ ಮೇಲೆತ್ತಿ ಕಂಬಿ ಹಿಡಿದೆ. ಮತ್ತದೇ ಪಿಸುದನಿ: "ದಸ್ತ . . .-ದಸ್ತ . . . " ಆದರೆ, ಅದಕ್ಕೆ ಅದೇ ನಿರಾಶೆಯ ಮಾರ್ನುಡಿ : "ಬಿಗಿಯಾಗಿ ಹಿಡಿದವ್ನೆ . . ." ಬಸ್ ನಿಲ್ಲುತ್ತಿದ್ದಂತೆಯೇ ನಾನು ಸಂದಣಿಯಿಂದ ಕೊಸರಿಕೊಂಡು ಬಾಗಿಲತ್ತ ಜರುಗಿದೆ. ತಕ್ಷಣ ಕಿವಿಗೆ ರಾಚಿತು: "ಇಳಿದು ಬಿಟ್ಟ . . ."

ಹುಸಿನಗುತ್ತಾ ತೂರಿ–ಜಾರಿ ಕೆಳಕ್ಕಿಳಿದೆ. 'ಜೇಬುಗಳು ಹುಷಾರು' ಎಂದು ಇತರರಿಗೆ, ಕೂಗಿ ಹೇಳುವುದಕ್ಕೂ ಸಾಧ್ಯವಾಗಲಿಲ್ಲ. ಕಲ್ಗುಡಿ ಮನೆಗೆ ಇನ್ನೂ ಬಂದಿರಲಿಲ್ಲಿ. ವಾಪಸು ಅದೇ ಪಾರ್ಕ್ ತುದಿಗೆ ಬಂದಾಗ ನಿಂತಿದ್ದ ಒಬ್ಬ ಆರಕ್ಷಕನನ್ನು ಕುತೂಹಲದಿಂದ ಕೇಳಿದೆ:

"ಜೇಬುಗಳ್ಳರ ಭಾಷೆಯಲ್ಲಿ "ದಸ್ತ . . . ದಸ್ತ . . ." ಎಂದರೆ ಏನರ್ಥ?"

ಅದಾ ಸಾರ್, ಪೋಲಿಸ್ನೋರು ಇದ್ದಾರೆ – ಅಂತ ಅರ್ಥ. ಹಾಗೇ, 'ಹತ್ತಿರ ಸರಿ' ಅನ್ನೋದ್ಕೆ 'ವತ್ತರ' ಅನ್ನುತ್ತಾರೆ. ಸಬ್‌ಇನ್‌ಸ್ಪೆಕ್ಟರಿಗೆ 'ಸ್ಟಾರ್' ಅಂತ . . . "

"ಬಸ್‌ನಲ್ಲಿ ಪೋಲಿಸ್ನೋರು ಇರಲಿಲ್ಲವಲ್ಲ . . .?" ನಾನೆಂದೆ. "ಇಲ್ಲಿ ಬಸ್ ನಿಲ್ಲುತ್ತೆ ; ಪೋಲಿಸ್ ಸ್ಟೇಷನ್ ಹತ್ತಿರ ಇದೆ. ಬಸ್ ಸ್ವಲ್ಪ ಮುಂದೆ ಹೋಗಲಿ ..? ಅಂತ ಹೇಳಿರಬಹುದು, ಸಾರ್. ಪೋಲಿಸ್ನೋರ ನೋಡಿದರೂ ಹಾಗೇ ಹೇಳುತ್ತಾರೆ. ಅವೆಲ್ಲಾ ಅವರ ಕೋಡಿಂಗ್ . . .? ಅಂದ.

ಆ ಶಬ್ದಕ್ಕೆ ಇದೇ ಅರ್ಥವೇ? ನನಗೇನೋ ಅನುಮಾನ. ಆದರೂ ಕಳ್ಳರಿಗೂ ಒಂದು ಕೋಡಿಂಗ್ ಭಾಷೆ ಇರುವುದರ ಅರಿವಾಯಿತು. ಇನ್ನು ಅದರ ಸರಿಯಾದ ಅಧ್ಯಯನವೂ ನಡೆಯಬೇಕಿದೆ–ಎಂಬುದನ್ನೂ ಇದು ಸೂಚಿಸಿದಂತಾಯಿತು.

**ಕ್ಯಾಂಡಿಡ್ 'ನುಡಿಗಟ್ಟು' :**

ಗ್ರಾಮೀಣ ಜನಪದದಲ್ಲಿ ಕಾಲ ಗಣನೆಗೆ ವಿವಿಧ ನುಡಿಗಟ್ಟುಗಳು ಬಳಕೆಯಲ್ಲಿವೆ. 'ಬೆಳ್ಳಿ ಮೂಡೋ ಹೊತ್ತು', 'ಸೂರ್ಯತಾಯೊಟ್ಟಿಗೆ ಸೇರೋಹೊತ್ತು . . .' ಇತ್ಯಾದಿಗಳು ಹಿಂದೂಗಳ ಪರಿಕಲ್ಪನೆಯವು. ಅನ್ಯ ಸಂಸ್ಕೃತಿಗಳವರಲ್ಲಿ ಇದೇ 'ಹೊತ್ತು' ಯಾವ ರೂಪ ಪಡೆದಿರಬಹುದು? ನಮ್ಮ ನಡುವೆಯೇ ಇರುವ ಮುಸ್ಲಿಮರು ಈ ಕಾಲವನ್ನು ಹೇಗೆ ಕಲ್ಪಿಸಿಕೊಂಡಿರಬಹುದು?– ಪ್ರಶ್ನೆಗಳೇನೋ ಕುತೂಹಲಕರವಾಗಿದ್ದರೂ ಮುಸ್ಲಿಂ ಜಾನಪದಕ್ಕೆ ಸಂಬಂಧಿಸಿ ಹೆಚ್ಚಿನ ಅಧ್ಯಯನಗಳೇ ನಡೆದಿಲ್ಲವಾದ್ದರಿಂದ–ಉತ್ತರಗಳೂ ಅಗೋಚರ. ಈ ಕೊರತೆಗೆ ಒಂದು ಸಣ್ಣ ಅಂಶ ಸೇರಿಸಬಹುದಾದ ಒಂದು ಕ್ಯಾಂಡಿಡ್ ಅವಕಾಶ ನನಗೆ ಬಿ ಟಿ ಎಸ್‌ನಲ್ಲಿ ಈಚೆಗೆ ಲಭ್ಯವಾಯಿತು. ಆ ಸಂದರ್ಭ ಹೀಗೆ:

ಸೀಟ್ ಇಲ್ಲದೆ ಬಸ್‌ನಲ್ಲಿ ನಿಂತಿದ್ದೆ. ನನ್ನ ಹಿಂದಿನ ಸಾಲಿನ ಸೀಟ್‌ನಲ್ಲಿ ಕುಳಿತಿದ್ದವನೊಬ್ಬ ಬಹು ಅಸಹನೆಯಿಂದ ಸರ್ಕಾರ, ಸಮಾಜ, ಭ್ರಷ್ಟತೆ ಇತ್ಯಾದಿಗಳ ಬಗೆಗೆ ಗಳಹುತ್ತಿದ್ದ. ಅವನ ಮಾತಿನ ಎಳೆಯಿಂದ ಆತನೊಬ್ಬ ಆಧುನಿಕ 'ತಬರ್' ಇದ್ದಿರಬಹುದೆಂದು ವೇದ್ಯವಾಗುತ್ತಿತ್ತು. ಕೈಲಿದ್ದ ಒಂದಷ್ಟು ಕಾಗದ ಪತ್ರ ಅದನ್ನು ಸಾಬೀತು ಪಡಿಸುತ್ತಿತ್ತು. ಎಷ್ಟೋ ಸಂದರ್ಭಗಳಲ್ಲಿ ನಾನೂ 'ತಬರ'ನಂತೆಯೇ ತೊಂದರೆ ಅನುಭವಿಸಿದ್ದರೂ ಇದು ಈ ಸಮಾಜದ ನಿತ್ಯದ ನೋವಾದ್ದರಿಂದ ನಾನು ಆತನ ಮಾತುಗಳಿಗೆ ಹೆಚ್ಚು ಗಮನಕೊಡ ಹೋಗಲಿಲ್ಲ. ಆದರೆ ಆತ ಪಕ್ಕದವನೊಡನೆ ತನ್ನ ಕಷ್ಟ ಪರಂಪರೆಯನ್ನು ಉಸುರುತ್ತಲೇ ಇದ್ದ. ಆ ಪಕ್ಕದ ಸಹೃದಯ ಏನೋ ಪ್ರಶ್ನಿಸಿದ ಎಂದು ಕಾಣುತ್ತದೆ; ಈತನ ಬಾಯಿಂದ "ಅಲ್ಲಾ ಅನ್ನೋ ಹೊತ್ಗೇ ಹೋಗಿದ್ದೆ; ಅವನು ಸಿಗಬೇಕಲ್ಲ . . ."– ಎಂಬ ಮಾತು ಹೊರಬಿತ್ತು.

ತಕ್ಷಣ ನನ್ನ 'ಕ್ಯಾಂಡಿಡ್' ಜಾಗ್ರತವಾಯಿತು; ಮನಸ್ಸಿನಲ್ಲಿಯೇ ಆ ನುಡಿಗಟ್ಟನ್ನು ದಾಖಲಿಸಿಕೊಂಡಿತು. ಅದರ ಅರ್ಥ. . .? ಆರ್ಕಿಮಿಡೀಸ್‌ನಂತೆ ಮನದೊಳಗೇ 'ಯುರೇಕಾ' ಹೇಳಿಕೊಂಡೆ : ಕಾಲವನ್ನು ಕುರಿತಾದ ಒಂದು ಮುಸ್ಲಿಂ ಸಂಸ್ಕೃತಿಯ ನುಡಿಗಟ್ಟು ಮೊದಲಬಾರಿಗೆ ನನ್ನ ಕಿವಿಗೆ ಬಿದ್ದಿತ್ತು. ಮುಂಜಾನೆ ನಮಾಜು ಮಾಡುವ ಹೊತ್ತನ್ನೇ ಆತ 'ಅಲ್ಲಾ ಅನ್ನೋ ಹೊತ್ತು' ಎಂದಿದ್ದ.

**ಕ್ಯಾಂಡಿಡ್ ಬಯ್ಗುಳ :**

ನನ್ನ 'ಜಾನಪದೀಯ' ಪುಸ್ತಕ ಮುದ್ರಣದ ಒದ್ದಾಟದಲ್ಲಿ ಸಿಕ್ಕಿ, ಮುದ್ರಣಾಲಯದಿಂದ ಹೊರಟು, ಕೊನೇ ಬಸ್ಸು ಹಿಡಿದು ಮಹಾಲಕ್ಷ್ಮಿಪುರ ಬಡಾವಣೆ ಹೆಬ್ಬಾಗಿಲಿಗೆ ಬರುವ

ವೇಳೆಗೆ ರಾತ್ರಿ ೧೧ ಗಂಟೆ ಆಗಿತ್ತು. ತಿರುವಿನಲ್ಲಿ ತಿರುಗಿದ ಬಸ್ ನಿಲುಗಡೆಯಲ್ಲಿ ನಿಂತಾಗ, ಹಿಂದಿನಿಂದ ಬಂದ ಯಾವುದೋ ವಾಹನ ದಾರಿಕೇಳಿ ಜೋರಾಗಿ ಹಾರನ್ ಕೀಗುಟ್ಟಿತು. ಅದರ ಕರ್ಕಶ ಶಬ್ದಕ್ಕೆ ಒಳಗಿದ್ದ ಜನರೆಲ್ಲಾ "ಹ್ಯೋ. . . " ಎಂದು ಪ್ರತಿಯಾಗಿ ಅವಾಜ್ ಹಾಕಿದರು. ಆಗ ಅದೇ ಗುಂಪಿನಿಂದ ಒಂದು ಕಂಠ ಅಬ್ಬರಿಸಿತು:

"ಯಾವನೋ ಅವ್ನು– ಹಾದ್ರಕ್ಕುಟ್ಟಿದ ಆಂಜನೇಯನಂಗೆ ಆಡ್ತಾನೆ . . ."

ಹಿಂದೆ ಕೇಳಿರದ ಬಯ್ಗುಳ–ನುಡಿ. ಸೀಟು ಸಿಕ್ಕ ತಕ್ಷಣ ಕೂತು ಬರೆದು ಕೊಂಡೆ (೧೩-೦೧-೦೧).

**ಕ್ಯಾಂಡಿಡ್ 'ಕತೆ' :**

ಇಬ್ಬರು ತರುಣರು ಕುಳಿತಿದ್ದ ಸೀಟ್ ಕಂಬಿಗೆ ಒರಗಿ ನಾನು ನಿಂತಿದ್ದೆ. ಬಸ್ ESI ಗೆ ಬರುವ ಹೊತ್ತಿಗೆ ಅದರಲೊಬ್ಬ ಒಂದು ಕತೆ ಪ್ರಾರಂಭಿಸಿದ :

'ನಾರಾಯಣ, ನಾರದನ್ನ ಕೇಳಿದನಂತೆ– 'ಈ ವಿಶ್ವದಲ್ಲಿ ಯಾರು ಅತಿ ಹೆಚ್ಚು?' ಅಂತ. ಅದಕ್ಕೆ ನಾರದ ಇದ್ದೋನು 'ನೀರು' ಅಂದನಂತೆ. 'ಯಾಕೆ?' ಅಂದದ್ದಕ್ಕೆ– 'ಅದು ಭೂಮಿಯ ಮೂರು ಭಾಗ ಆವರಿಸಿಕೊಂಡಿದೆ . . .'

'ಹಾಗಾದರೆ, ಅಂಥಾ ಹೆಚ್ಚಿನ ನೀರನ್ನೆಲ್ಲಾ ಅಗಸ್ತ್ಯ ಒಂದೇ ಆಪೋಶನಕ್ಕೆ ತಗೊಂಡನಲ್ಲಾ? ಆದ್ದರಿಂದ, ಅವನು ಹೆಚ್ಚಲ್ಲವಾ? 'ಹೌದು, ಅಗಸ್ತ್ಯನೇ ಹೆಚ್ಚು'– ಎಂದನಂತೆ, ಆಗ ನಾರದ. 'ಆದರೆ, ಅಂಥಾ ಅಗಸ್ತ್ಯ ಆಕಾಶದಲ್ಲಿ ಒಂದು ಚುಕ್ಕೆ ಆಗಿ ಅವನಲ್ಲಾ; ಆದ್ದರಿಂದ ಆಕಾಶಾನೇ ಹೆಚ್ಚಲ್ಲವಾ? –ಎಂದನಂತೆ ನಾರಾಯಣ.

'ಹೌದು'.

'ಆದರೆ, ಆ ಆಕಾಶಾನ್ನೂ ವಾಮನರೂಪದ ವಿಷ್ಣು ಒಂದೇ ಹೆಜ್ಜೆಗೆ ಅಳೆದನಲ್ಲಾ! ಅಂಥಾ ವಿಷ್ಣುವೇ ಹೆಚ್ಚಲ್ಲವಾ?' ಅಂದನಂತೆ, ನಾರಾಯಣ. ನಾರದ 'ಹೌದು' ಅಂದಾಗ, 'ಅಂಥಾ ವಿಷ್ಣುವನ್ನೂ– ದೇವರನ್ನೂ ತನ್ನ ಹೃದಯಲ್ಲಿಟ್ಟುಕೊಂಡು ಪೂಜಿಸಿ, ಭಕ್ತಿಯಿಂದ ಒಲಿಸಿಕೊಳ್ತಾನಲ್ಲಾ, ಭಕ್ತ ! ಆದ್ದರಿಂದ ದೇವರಿಗಿಂತ ಭಕ್ತನೇ ಹೆಚ್ಚಲ್ಲವಾ? ಅಂದನಂತೆ ನಾರಾಯಣ.

ನಾರದ ಇದ್ದೋನು 'ಹೌದು, ಹೌದು' . . ? ಅಂತ ಒಪ್ಪಿದನಂತೆ. ಮೇಲು ನೋಟಕ್ಕೆ ಪೌರಾಣಿಕ ತಾರ್ಕಿಕತೆ ಈ ಕತೆಯಲ್ಲಿದೆ ಎನಿಸಿದರೂ, ವಾಸ್ತವವಾಗಿ ಅದರ ತಳಪಾಯವೇ ಭದ್ರವಾಗಿಲ್ಲ. ಭೂಮಿಯ ಇನ್ನೂ ಒಂದು ಭಾಗ ನೀರಿಗೆ ದಕ್ಕದೆ ತಲೆಎತ್ತಿನಿಂತಿದೆಯಲ್ಲಾ? ಆದ್ದರಿಂದ ಭೂಮಿಯೇ ಹೆಚ್ಚಲ್ಲವೇ? ಅಥವಾ ಇವೆರಡನ್ನೂ ಆವರಿಸಿರುವ ವಾಯುವೇ ಹೆಚ್ಚಲ್ಲವೇ? ಎಂದೂ ವಾದಿಸಬಹುದು. ಆದರೆ ಕತೆ ಕೇಳುತ್ತಿದ್ದವ ಬರಿದೇ 'ಹೂ' ಗುಟ್ಟುತ್ತಿದ್ದ. ಇನ್ನೊಬ್ಬ ಉತ್ಸುಕತೆಯಿಂದ ಹೇಳುತ್ತಿದ್ದ. ಅವರ ಕೈಲಿದ್ದ ಪುಸ್ತಕ, ಪರಿಕರಗಳಿಂದ ಅವರು ಕಂಪ್ಯೂಟರ್ ವಿದ್ಯಾರ್ಥಿಗಳೆಂಬುದು ಸ್ಪಷ್ಟವಾಗುತ್ತಿತ್ತು.

ಕತೆ ಮುಗಿದ ನಂತರ ಆತ 'ಇಂಥಾ ಕತೆ ತನಗೆ ಭಾರೀ ಇಷ್ಟವೆಂದೂ, ಒಬ್ಬ 'ಸ್ವಾಮಿ'ಗಳು (ಪ್ರವಚನದಲ್ಲಿ) ಈ ಕತೆ ಹೇಳಿದರೆಂದೂ ತಾನು ಇಂಥೋವನ್ನೆಲ್ಲಾ ಕೇಳಿ, ಸದಾ ಮನಸ್ಸಿನಲ್ಲಿಟ್ಟುಕೊಂಡು ಇತರರಿಗೆ ಹೇಳುವುದಾಗಿಯೂ (ಹೆಮ್ಮೆಯಿಂದ) ಹೇಳಿದ (೧೮-೦೮-೧೯೯೯).

ಕ್ಯಾಂಡಿಡ್ ಜಾನಪದಕ್ಕೆ ಅನಾಯಾಸವಾಗಿ ಒಂದು 'ಕತೆ' ಸಿಕ್ಕಿತು ಎಂದುಕೊಂಡರೂ, ನಮ್ಮ ತರುಣ ಜನಾಂಗದ 'ಕಲಿಕೆ', 'ಆಲೋಚನೆ'ಯ ಮಟ್ಟದ ಒಂದು ನಿದರ್ಶನದ ದರ್ಶನವೂ ಆದಂತಾಗಿ ಒಂದು ಕ್ಷಣ ಮೌನವಾದೆ. – ಹೀಗೆ ಜಾನಪದದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಅಪರೂಪದ ಗಾದೆ, ಕತೆ, ಸಾಮಲೆ, ನಂಬಿಕೆ . . .ಇತ್ಯಾದಿಗಳನ್ನು ಕ್ಯಾಂಡಿಡ್ ಜಾನಪದದಲ್ಲಿ ಕೇಳಬಹುದು; ಸಂಗ್ರಹಿಸಬಹುದು. ಸಹಜ ಸಂದರ್ಭ ಮತ್ತು ಸ್ವಯಂ ಸ್ಫೂರ್ತಿಯಿಂದ ಅವರು ಇವುಗಳನ್ನು ಹೇಳಿಕೊಳ್ಳುವುದರಿಂದ, ನಮ್ಮ ದಾಖಲೆಗಾಗಿ ಕೇಳಿ ಬರೆದುಕೊಳ್ಳುವುದಕ್ಕಿಂತಲೂ ಹೆಚ್ಚಿನ ಸಹಜತೆ, (ಖಚಿತತೆ?) ಅವುಗಳಿಗಿರುತ್ತದೆ–ಎನ್ನುವುದು ಇವುಗಳ ವಿಶೇಷವಾಗಿರುತ್ತದೆ. ಒಂದು ಅನಿವಾರ್ಯ ಕೊರತೆ ಎಂದರೆ–ಆ ನಿರೂಪಕರ ಯಥಾ 'ಭಾಷೆ–ಶಬ್ದಗಳಲ್ಲಿಯೇ ಮಾಹಿತಿ ದಾಖಲು ಮಾಡಿಕೊಳ್ಳುವುದು ಕಷ್ಟ. (ಸಣ್ಣ ಟೇಪ್‌ರೆಕಾರ್ಡರನ್ನು ಜೇಬಿನಲ್ಲಿ ಅಡಗಿಸಿಟ್ಟುಕೊಂಡಿದ್ದರೆ ಅದೂ ಕಷ್ಟವಲ್ಲ). ನಿರೂಪಕರ ವೈಯಕ್ತಿಕ ಮಾಹಿತಿಯೂ ಇಲ್ಲಿ ದಕ್ಕುವುದಿಲ್ಲ. ಆದರೇನಂತೆ, ಹಲವೊಮ್ಮೆ ಬಾಯಿಬಿಟ್ಟು ಕೇಳಿದರೂ ಹೊರಬರದ ಜಾನಪದೀಯ ಸಂಗತಿಗಳು ಇಲ್ಲಿ ಅಧ್ಯಯನಕಾರರಿಗೆ ಲಭ್ಯವಾಗುತ್ತವೆಯಲ್ಲಾ! ಜೊತೆಗೆ, ಅಧ್ಯಯನಕಾರ ಬಸ್ಸು, ಬಸ್‌ನಿಲ್ದಾಣ, ಹೋಟೆಲು, ರೈಲು . . . ಹೀಗೆ ನಿಂತಲ್ಲಿ, ಕುಳಿತಲ್ಲಿ, ನಡೆವಲ್ಲಿಯೂ–ಎಲ್ಲೆಂದರಲ್ಲಿ–ತಾನು ಇದ್ದಲ್ಲಿಯೇ ಜಾನಪದಕ್ಕೆ ಒಟ್ಟು ಸಮಾಜ– ಸಂಸ್ಕೃತಿಗೆ ಸಂಬಂಧಿಸಿದ ಮಾಹಿತಿಗಳನ್ನು ಶ್ರಮವಿಲ್ಲದೇ ಸಂಗ್ರಹಿಸಬಹುದಲ್ಲ !

ಅಂತೂ 'ಪ್ರಾಚ್ಯ ಜಾನಪದೀಯ ಅಧ್ಯಯನದಲ್ಲಿ ಆಗಿಹೋದ್ದ ಬದುಕನ್ನು ಕುರಿತ ಶೋಧ–ಪುನರ್ ರಚನೆಯ ಸಾಹಸವಿದ್ದರೆ, 'ಕ್ಯಾಂಡಿಡ್ ಜಾನಪದ' ಪ್ರಸ್ತುತದ ಬದುಕಿನ 'ಅಗೋಚರ' ಮುಖಗಳನ್ನು ಅರಿಯುವ ವಿಶಿಷ್ಟ ಕಾರ್ಯ ಮಾಡುತ್ತದೆ. ಮತ್ತು ಈ ಮೂಲಕ ನಮ್ಮ ಜಾನಪದ ಅರಿವಿನ ಪರಿಧಿಯನ್ನು ವಿಶೇಷವಾಗಿ ವಿಸ್ತರಿಸುತ್ತವೆ.

# ಕನ್ನಡ ನಾಡಿನ ಅರಸರು ಕಬ್ಬಿಗರಾಗಿ; ಸಮೀಕ್ಷೆ

ಡಾ. ಸಿ. ನಾಗಭೂಷಣ.

ಕನ್ನಡನಾಡಿನ ಅರಸು ಮನೆತನಗಳು ರಾಜಕೀಯ, ಧಾರ್ಮಿಕ, ಸಾಹಿತ್ಯಕ, ಸಾಮಾಜಿಕ, ಕಲೆ, ವಾಸ್ತುಶಿಲ್ಪ ಕ್ಷೇತ್ರಗಳಿಗೆ ನೀಡಿರುವ ಕೊಡುಗೆ ಅಪಾರವಾದುದು. ಕನ್ನಡ ಸಾಹಿತ್ಯಚರಿತ್ರೆಯು ಬೆಳೆವಣಿಗೆಯಲ್ಲಿ ಅರಸುಮನೆತನಗಳು ಅತ್ಯಂತ ಜವಾಬ್ದಾರಿಯುತವಾದ ಪಾತ್ರವನ್ನು ವಹಿಸಿವೆ. ಅರಸುಮನೆತನಗಳಿಗೂ ಕನ್ನಡ ಸಾಹಿತ್ಯಕ್ಕೂ ನಿಕಟವಾದ ಸಂಪರ್ಕ ಉಂಟು. ರಾಜಾಶ್ರಯ ಸಾಹಿತ್ಯವನ್ನು ಪೋಷಿಸಿ ಬೆಳೆಸಿದ್ದಾರೆ. ಶಾತವಾಹನರು, ಕದಂಬರು, ಗಂಗರು, ಬದಾಮಿಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಸೇವುಣರು, ಹೊಯ್ಸಳರು, ವಿಜಯನಗರ - ಮೈಸೂರು ಒಡೆಯರು ಇತ್ಯಾದಿ ಪ್ರಮುಖ ರಾಜಮನೆತಗಳು ಹಾಗೂ ಕೆಳದಿ, ಇಕ್ಕೇರಿ, ಸ್ವಾದಿ, ಬಿಜ್ಜಾವರ ಮಹಾನಾಡು ಪ್ರಭುಗಳು, ಹಾಗಲವಾಡಿ, ಕಳಲೆ, ಹದಿನಾಡು ಇತ್ಯಾದಿ ಸ್ಥಳೀಯ ಅರಸರ ಕಾಲದಲ್ಲಿ ವೈವಿಧ್ಯಮಯ ಸಾಹಿತ್ಯ ಸೃಷ್ಟಿಯಾಗಿದೆ. ಕನ್ನಡ ನಾಡನ್ನು ಆಳಿದ ಅರಸರುಗಳು ವಿವಿಧ ಮತಧರ್ಮಗಳಿಗೆ ಸೇರಿದವರಾದರೂ ಅವರು ಅನುಸರಿಸಿದ ಧಾರ್ಮಿಕ ದೃಷ್ಟಿಮಾತ್ರ ಸ್ಮರಣೀಯವಾದುದು. ಅರಸರುಗಳು ಕವಿಗಳ ಮತಧರ್ಮವನ್ನು ಗಣನೆಗೆ ತೆಗೆದುಕೊಳ್ಳದೆ ಕವಿಕಾವ್ಯ ಪಕ್ಷಪಾತಿಗಳಾಗಿ ಮೆರೆದಿದ್ದಾರೆ. ಕವಿಗಳಿಗೆ ಆಶ್ರಯ ನೀಡುವುದರ ಮೂಲಕ ಸಾಹಿತ್ಯ ಸಂಸ್ಕೃತಿಯನ್ನು ಉಳಿಸಿ ಬೆಳೆಸಿ ಪೋಷಿಸಿಕೊಂಡು ಬಂದಿದ್ದಾರೆ. ಕನ್ನಡ ಸಾಹಿತ್ಯ ಪರಂಪರೆಯನ್ನು ವಿಸ್ತರಿಸಲು, ಕವಿಗಳಿಗೆ ಸಾಹಿತ್ಯ ಕೃಷಿ ನಡೆಸಲು ಆಶ್ರಯ ಮತ್ತು ಪ್ರೇರಣೆ ನೀಡಿದ ಅರಸರುಗಳು ತಾವೂ ಸಾಹಿತ್ಯ ನಿರ್ಮಾಣಮಾಡಿದ್ದಾರೆ. ರಾಜಮನೆತನಗಳಲ್ಲಿಯ ಕೆಲವು ಅರಸರುಗಳು ತಾವೇ ಸ್ವತಃ ಕವಿಗಳಾಗಿದ್ದು ಸಾಹಿತ್ಯ ಹಾಗೂ ಶಾಸ್ತ್ರವಿಷಯಗಳ ಕ್ಷೇತ್ರಗಳಿಗೆ ಸಂಬಂಧಿಸಿದ ಹಾಗೆ ಮೌಲಿಕವಾದ ಕೃತಿಗಳನ್ನು ವಿಭಿನ್ನ ಭಾಷೆಗಳಲ್ಲಿ ರಚಿಸಿರುವುದು ಕಂಡು ಬರುತ್ತದೆ. ಅರಸರುಗಳು ಕನ್ನಡ ಕವಿಗಳಿಗೆ ಪ್ರೋತ್ಸಾಹ ನೀಡಿದರೂ ತಾವು ಮಾತ್ರ ಬಹುಮಟ್ಟಿಗೆ ಕನ್ನಡ ಭಾಷೆಯನ್ನು ಹೊರತು ಪಡಿಸಿ ಸಂಸ್ಕೃತ ಹಾಗೂ ಇತರ ಅನ್ಯ ಭಾಷೆಗಳಲ್ಲಿಯೇ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಕೆಲವೆಡೆ ಅರಸರುಗಳ ಹೆಸರಿನಲ್ಲಿರುವ ಕೃತಿಗಳು ಅವರ ಆಸ್ಥಾನದಲ್ಲಿದ್ದ ಕವಿಗಳಿಂದ ರಚಿತವಾಗಿ ಪ್ರಭುವಿನ ಹೆಸರಿನಲ್ಲಿ ಪ್ರಸಿದ್ಧಿಗೊಂಡಿರುವ ಉದಾಹರಣೆಗಳೂ ಇವೆ. ಕೆಲವು ಆಸ್ಥಾನ ಕವಿಗಳು ಕೃತಿಗಳನ್ನು ರಚಿಸಿ ಪ್ರಭುವಿನ ಹೆಸರಿಗೆ ಅಂಕಿತ ಮಾಡಿರುವುದರಿಂದ ಆ ಕೃತಿಗಳು ರಾಜರಿಂದಲೇ ರಚಿತವಾಗಿವೆ ಎಂಬಂತಾಗಿದೆ. ಈ ರೀತಿಯ ಅನಿಸಿಕೆ ಸಹಜವಾಗಿ ಮೈಸೂರು ಒಡೆಯರ ಸಾಹಿತ್ಯ ಕೃತಿಗಳಿಗೆ ಸಂಬಂಧಿಸಿದ್ದಾಗಿದೆ.

ರಾಜಮನೆತನಗಳಲ್ಲಿ ರಾಜರುಗಳಿಗಿಂತ ಸ್ಥಳೀಯ ಅರಸರುಗಳೇ ಹೆಚ್ಚಿನ ಸಂಖ್ಯೆಯಲ್ಲಿ ಸಾಹಿತ್ಯ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದಾರೆ. ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ

ಕಾಲ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಸ್ಥಳೀಯ ಅರಸರುಗಳೇ ಹೆಚ್ಚಾಗಿ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಹೆಚ್ಚಿನ ಸಂಗತಿ ಎಂದರೆ ಅರಸುಮನೆತನದವರು ರಚಿಸಿರುವ ಕೃತಿಗಳು ಹೆಚ್ಚಾಗಿ ಶಾಸ್ತ್ರ ಸಾಹಿತ್ಯ, ಟೀಕಾ ಸಾಹಿತ್ಯ ಹಾಗೂ ವಿಶ್ವಕೋಶ ಸಾಹಿತ್ಯ ಪರಿಧಿಯ ವ್ಯಾಪ್ತಿಗೆ ಒಳಪಟ್ಟಿವೆ. ಅರಸರುಗಳ ಸಾಹಿತ್ಯ ಕೃಷಿಯಲ್ಲಿ ಕೆಲವೆಡೆ ಪುರಾಣದ ವಸ್ತುವನ್ನೇ ಅಳವಡಿಸಿಕೊಂಡರೂ ಅದರ ಜೊತೆ ತಾತ್ಕಾಲೀನ ರಾಜಕೀಯ ಸಾಂಸ್ಕೃತಿಕ ಸಂಗತಿಗಳನ್ನು ಸಮೀಕರಿಸಿರುವುದು ಕಂಡು ಬರುತ್ತದೆ. ಕನ್ನಡ ನಾಡಿನ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಪುನರ್‌ರಚಿಸುವಲ್ಲಿ ಈ ಅರಸರುಗಳ ಸಾಹಿತ್ಯ ಕೃತಿಗಳು ಗಮನಿಸತಕ್ಕಂಥವುಗಳಾಗಿವೆ. ಅರಸರುಗಳು ರಚಿಸಿರುವ ಕೃತಿಗಳಲ್ಲಿ ಮುಮ್ಮಡಿ ಸೋಮೇಶ್ವರರ ಮಾನಸೋಲ್ಲಾಸ, ಹಿರಿಯ ಬಸಪ್ಪನಾಯಕರ ಶಿವತತ್ತ್ವರತ್ನಾಕರ, ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀತತ್ತ್ವನಿಧಿ ಕೃತಿಗಳು ವಿಶ್ವಕೋಶಗಳು ಎಂಬ ಹೆಗ್ಗಳಿಕೆಗೆ ಪಾತ್ರವಾಗಿವೆ.

ಅಚ್ಚರಿಯ ಸಂಗತಿ ಎಂದರೆ ಸ್ಥಳೀಯ ಅರಸರುಗಳು ತಾವು ಒಂದು ಧರ್ಮವನ್ನು ಅನುಸರಿಸಿದ್ದರೂ ಅನ್ಯಧರ್ಮೀಯ ವಸ್ತುಗಳನ್ನು ತೆಗೆದುಕೊಂಡು ಕಾವ್ಯರಚಿಸಿದ್ದಾರೆ. ಈ ನಿಟ್ಟಿನಲ್ಲಿ ಒಂದನೆಯ ಮಂಗರಸ ಹಾಗೂ ಮೂರನೆಯ ಮಂಗರಸರನ್ನು ಹೆಸರಿಸಬಹುದು. ಒಂದನೆಯ ಮಂಗರಸನು ಜೈನ ಧರ್ಮೀಯನಾದರೂ ವೈದಿಕ ಸಂಪ್ರದಾಯದ ವೈದ್ಯಗ್ರಂಥವನ್ನು ಅನುಸರಿಸಿ ಖಗೇಂದ್ರಮಣಿದರ್ಪಣ ಎಂಬ ವೈದ್ಯಗ್ರಂಥವನ್ನು ರಚಿಸಿದ್ದಾನೆ. ಶೈವ ಧರ್ಮೀಯರಾಗಿದ್ದ ಚಂಗಾಳ್ವ ವಂಶದವನಾದ ಮೂರನೆಯ ಮಂಗರಸನು ಜೈನಧರ್ಮಕ್ಕೆ ಸಂಬಂಧಿಸಿದ ಐದು ಕೃತಿಗಳನ್ನು ರಚಿಸಿದ್ದಾನೆ. ಅರಸರುಗಳ ಜೊತೆಯಲ್ಲಿ ಅರಸಿಯರೂ (ವಿಜ್ಜಿಕಾ, ಗಂಗಾದೇವಿ, ತಿರುಮಲಾಂಬೆ, ಚೆಲುವಾಂಬೆ) ಸಾಹಿತ್ಯ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದಾರೆ. ಅರಸಿಯರ ಸಾಹಿತ್ಯ ಕೃತಿಗಳು ಧಾರ್ಮಿಕ ಹಾಗೂ ಐತಿಹಾಸಿಕ ವಿಷಯಗಳನ್ನು ಒಳಗೊಂಡಿದ್ದು ಸಂಸ್ಕೃತ ಹಾಗೂ ಕನ್ನಡ ಭಾಷೆಗಳೆರಡರಲ್ಲಿಯೂ ರಚಿತವಾಗಿವೆ. ರಾಣಿಯರು ರಚಿಸಿರುವ ಐತಿಹಾಸಿಕ ಕಾವ್ಯಗಳು ಆಯಾ ಅರಸುಮನೆತನಗಳ ಸಮಕಾಲೀನ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿವೆ. ಈ ನಿಟ್ಟಿನಲ್ಲಿ ಗಂಗಾದೇವಿಯ 'ಮಧುರಾ ವಿಜಯಂ' ಸಂಸ್ಕೃತ ಕಾವ್ಯವನ್ನು ಹೆಸರಿಸಬಹುದು. ಈ ಕಾವ್ಯವು ಪತಿ ಕುಮಾರ ಕಂಪಣನು ಮಧುರೆಯ ಮೇಲೆ ನಡೆಸಿದ ವಿಜಯವನ್ನು ಕುರಿತಾದ ವಿವರಣೆಯನ್ನು ಒಳಗೊಂಡಿದೆ. ದಕ್ಷಿಣ ಭಾರತದಲ್ಲಿ ಪ್ರಚಲಿತವಿದ್ದ ಸ್ಥಿತಿಗತಿಗಳ ಯಥಾರ್ಥ ಚಿತ್ರಣವನ್ನು ಒಳಗೊಂಡಿದೆ. ಈ ಕೃತಿಗೆ ೧೫ನೆಯ ಶತಮಾನಕ್ಕೆ ಮುಂಚೆ ದಕ್ಷಿಣ ಭಾರತದ ಚರಿತ್ರೆಯನ್ನು ಕುರಿತಾದ ಏಕೈಕ ಐತಿಹಾಸಿಕ ಕೃತಿ ಎಂಬ ಮನ್ನಣೆಯು ಸಂಶೋಧಕರಿಂದ ಲಭಿಸಿರುವುದರ ಜೊತೆಗೆ ಗಂಗಾಂಬಿಕೆಯು ದಕ್ಷಿಣ ಭಾರತ ಚರಿತ್ರೆಯ ಪ್ರಪ್ರಥಮ ಲೇಖಕಿ ಎಂಬ ಬಿರುದಿಗೂ ಪಾತ್ರಳಾಗಿದ್ದಾಳೆ. ಅರಸರುಗಳು ರಚಿಸಿರುವ ಬಹಳಷ್ಟು ಕೃತಿಗಳು ಅಪ್ರಕಟಿತವಾಗಿಯೇ ಉಳಿದಿವೆ. ಬೇರೆ ಬೇರೆ ಆಕರಗಳಲ್ಲಿಯ ಮಾಹಿತಿಯಿಂದ ಅರಸರುಗಳು ರಚಿಸಿರುವ ಕೃತಿಗಳ ಬಗೆಗೆ ಉಲ್ಲೇಖ ತಿಳಿದುಬಂದಿದೆ. ಅರಸರು ರಚಿಸಿರುವ ಎಷ್ಟೋ ಕೃತಿಗಳು ಅಪ್ರಕಟಿತವಾಗಿರುವುದರಿಂದ ಹೆಸರುಗಳಷ್ಟೇ ತಿಳಿದು ಬರುತ್ತವೆಯೇ ಹೊರತು ಆ ಕೃತಿಗಳ ಸ್ವರೂಪದ ಬಗೆಗೆ ಏನನ್ನೂ ಹೇಳುವಂತಿಲ್ಲ.

ಈ ಲೇಖನದಲ್ಲಿ ಪ್ರಮುಖ ಅರಸುಮನೆತಗಳ ಅರಸರುಗಳೂ, ಅರಸಿಯರೂ ಸ್ಥಳೀಯ ಅರಸರು ರಚಿಸಿರುವ ಸಾಹಿತ್ಯ ಕೃತಿಗಳನ್ನು ವಿವಿಧ ಮೂಲಗಳಿಂದ ಪರಿಶೋಧಿಸಿ ಸಂಗ್ರಹಿಸಿ ಕಾಲಾನುಕ್ರಮದಲ್ಲಿ ಸಂಕ್ಷಿಪ್ತವಾಗಿ ಒಂದೆಡೆ ನೀಡಲಾಗಿದೆ. ಇದು ಒಂದು ರೀತಿಯಲ್ಲಿ ಖಂಡುಗವನ್ನು ಬಳ್ಳದಲ್ಲಿ ಅಳೆದಂತೆ ಎಂಬಂತಾಗಿದೆ. ಬಹುಮಟ್ಟಿಗೆ ಹಲವಾರು ಆಕರಗಳ ಮೂಲಕ ಎಲ್ಲಾ ಕಬ್ಬಿಗ ಅರಸರುಗಳ ಸಾಹಿತ್ಯ ಕೃತಿಗಳ ಲಘುಸಮೀಕ್ಷೆ ಮಾಡಲು ಸಾಧ್ಯವಾದಷ್ಟು ಮಟ್ಟಿಗೆ ಪ್ರಯತ್ನಿಸಿದ್ದೇನೆಂದು ವಿನಮ್ರವಾಗಿ ಸೂಚಿಸ ಬಯಸುತ್ತೇನೆ. ಏಕೆಂದರೆ ಅರಸರುಗಳು ರಚಿಸಿರುವ ಒಂದೊಂದು ಕೃತಿಯೂ ಸುದೀರ್ಘ ಲೇಖನ ಬರೆಯುವಷ್ಟು ವಿಷಯ ಸಂಪತ್ತನ್ನು ಒಳಗೊಂಡಿದೆ. ಅನುಕ್ರಮವಾಗಿ ಪ್ರಮುಖ ಅರಸುಮನೆತನಗಳ ಹಾಗೂ ಸ್ಥಳೀಯ ಅರಸರು ರಚಿಸಿರುವ ಕೃತಿಗಳ ಬಗೆಗೆ ಕೆಳಕಂಡಂತೆ ಸಂಕ್ಷಿಪ್ತ ಮಾಹಿತಿಯನ್ನು ನೀಡಲಾಗಿದೆ.

## ಪ್ರಮುಖ ಅರಸುಮನೆತನದ ಕಬ್ಬಿಗ ರಾಜರುಗಳು :

೧. **ಹಾಲರಾಜ** : (ಕ್ರಿ.ಶ. ೧೫೦) ಶಾತವಾಹನ ಅರಸುಮನೆತನದ ೧೭ನೆಯ ದೊರೆಯಾದ ಹಾಲರಾಜನು ಗಾಥಾಸಪ್ತಶತಿ ಎಂಬ ಕೃತಿಯನ್ನು ರಚಿಸಿದ್ದಾನೆ. ಇದು ಪ್ರಾಕೃತ ಭಾಷೆಯಲ್ಲಿ ರಚಿತವಾದ ಪದ್ಯ ಸಂಕಲನ. ಈತನು ಕುಂತಲ ದೇಶದ ದೊರೆ. ಈ ಕೃತಿಯಲ್ಲಿ ಪೊಟ್ಟೆ (ಹೊಟ್ಟೆ) ತುಪ್ಪ ಎಂಬ ನಾಮ ಪದಗಳೂ, ಪೆಟ್ಟು (ಹೊಡೆ) ತೀರ್ (ಶಕ್ಯವಾಗು) ಎಂಬ ಕನ್ನಡ ಧಾತುಗಳು ಪ್ರಯೋಗವಾಗಿರುವುದರಿಂದ ಸಂಶೋಧಕರಾದ ಎಂ. ಗೋವಿಂದ ಪೈಗಳು ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಕನ್ನಡ ಸಾಹಿತ್ಯವು ಗಾಥಾಸಪ್ತಶತಿಯ ಕಾಲಕ್ಕಿಂತಲೂ ಬಹಳ ಹಿಂದಿನಿಂದಲೇ ಸಮೃದ್ಧವಾಗಿದ್ದಿರಬೇಕೆಂಬುದು ಇವರ ತರ್ಕ. ಇವರ ಊಹೆ ವಿಚಾರಣೀಯವಾದರೂ ನಿರ್ಣಾಯಕವಾಗಲಾರದು. ಪ್ರಾಕೃತ ಭಾಷೆಯ ಕೃತಿಯನ್ನು ಎಸ್. ವಿ. ಪರಮೇಶ್ವರ ಭಟ್ಟರು ಕನ್ನಡಕ್ಕೆ ಅನುವಾದಿಸಿದ್ದಾರೆ.

೨. **ಇಮ್ಮಡಿ ಮಾಧವ** : (ಕ್ರಿ.ಶ. ೪೬೦-೫೦೦) ತಲಕಾಡಿನ ಗಂಗ ಅರಸುಮನೆತನಕ್ಕೆ ಸೇರಿದ ಈತನು ದತ್ತಕ ಸೂತ್ರದ ಮೇಲೆ ವೃತ್ತಿಯನ್ನು ಬರೆದಿದ್ದಾನೆ. ಈ ವ್ಯಾಖ್ಯಾನ ಸಂಸ್ಕೃತದಲ್ಲಿ ಇದ್ದಿರಬೇಕೆಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ; ಕಾಮಶಾಸ್ತ್ರದ ಮೇಲೆ ಬರೆದ ವ್ಯಾಖ್ಯಾನವಾಗಿದೆ. ಇತ್ತೀಚಿಗೆ ಈ ಕೃತಿ ಉಪಲಬ್ಧವಾಗಿದೆ ಎಂದು ಎಸ್. ಶಿವಣ್ಣ ಅವರು ತಿಳಿಸಿರುತ್ತಾರೆ.

೩. **ದುರ್ವಿನೀತ** : (ಕ್ರಿ. ಶ. ೫೫೫-೬೦೫) ಗಂಗ ದೊರೆಗಳಲ್ಲಿ ಪ್ರಸಿದ್ಧನಾದ ಈತನು ಪ್ರಮುಖ ಗದ್ಯ ಕವಿಗಳಲ್ಲಿ ಒಬ್ಬ ಎಂಬುದಾಗಿ ಕವಿರಾಜಮಾರ್ಗದ ಉಲ್ಲೇಖದಿಂದ ತಿಳಿದು ಬರುತ್ತದೆ. ಈತನು ಭಾರವಿಯ ಕಿರಾತಾರ್ಜುನೀಯದ ೧೫ನೆಯ ಸರ್ಗದ ಮೇಲೆ ಟೀಕೆಯನ್ನು ಬರೆದಿದ್ದಾನೆಂದು ನಲ್ಲಾಲ ತಾಮ್ರಪಟದಲ್ಲಿಯ 'ಕಿರಾತಾರ್ಜುನೀಯ ಪಂಚದಶಸರ್ಗ ಟೀಕಾಕಾರೋ ದುರ್ವಿನೀತ ನಾಮಧೇಯ' ಎಂಬ ಉಲ್ಲೇಖದಿಂದ ತಿಳಿದು ಬರುತ್ತದೆ. ಈ ಭಾಷ್ಯರೂಪದ ಕೃತಿ ಗಂಗರ ಶಾಸನಗಳಲ್ಲಿ ಅಧಿಕ ಸಲ

ಉಲ್ಲೇಖಗೊಂಡಿರುವುದರಿಂದ ಪ್ರಸಿದ್ಧಿ ಪಡೆದಿತ್ತು ಎಂದೆನಿಸುತ್ತದೆ. ದುರ್ವಿನೀತನು ಬರೆದ ಟೀಕೆ ಕನ್ನಡದಲ್ಲಿದ್ದಿತೇ ಅಥವಾ ಸಂಸ್ಕೃತದಲ್ಲಿದ್ದಿತೇ? ಎಂಬ ವಿಷಯ ಸಂಶೋಧಕರ ಚರ್ಚೆಯಾಗಿಯೇ ಉಳಿದಿದೆ. ಗುಮ್ಮರೆಡ್ಡಿಪುರದ ಶಾಸನದಲ್ಲಿ 'ಶಬ್ದಾವತಾರ ಕಾರೇಣ ದೇವ ಭಾರತಿ ನಿಬದ್ಧ ವಡ್ಡಕಥೇನ ಕಿರಾತಾರ್ಜುನೀಯೆ ಪಂಚದಶಸರ್ಗ ಟೀಕಾ ಕಾರೇಣ ದುರ್ವಿನೀತ ನಾಮಧೇಯನ' ಎಂದಿರುವುದರಿಂದ ಈತನು ಶಬ್ದಾವತಾರ ವ್ಯಾಕರಣ ಸಂಬಂಧಿ ಕೃತಿಯನ್ನು ರಚಿಸಿದ್ದಲ್ಲದೆ ಪೈಶಾಚಿ ಭಾಷೆಯಲ್ಲಿದ್ದ ಗುಣಾಢ್ಯನ ವಡ್ಡಕಥೆಯನ್ನು ಸಂಸ್ಕೃತಕ್ಕೆ ಅನುವಾದಿಸಿದ್ದನೆಂದು ತಿಳಿದು ಬರುತ್ತದೆ.

೪. **ಶ್ರೀಪುರಷ** : (ಕ್ರಿ. ಶ. ೭೨೬-೭೮೮) ಗಂಗ ವಂಶದವನಾದ ಈತನು ಗಜಶಾಸ್ತ್ರದ ಕರ್ತೃವಾಗಿದ್ದ ಎಂಬುದು ನಗರ ಶಾಸನದಲ್ಲಿಯ 'ಶ್ರೀಪುರುಷಂ ಶ್ರೀವಲ್ಲಭನೆನಿಪನ್ವರ್ಥನಾಮಮಂ ತಾಳ್ದಿ ಗಜಶಾಸ್ತ್ರ ಕರ್ತೃವೆನಿಸಿ' ಎಂಬ ಉಲ್ಲೇಖದಿಂದ (ಎ.ಕ. VIII. ನಗರ ೩೫) ತಿಳಿದುಬರುತ್ತದೆ.

೫. **ಸೈಗೊಟ್ಟ ಶಿವಮಾರ** : (ಕ್ರಿ. ಶ. ೮೦೦) ಗಂಗರಸನಾದ ಈತನು ರಚಿಸಿರುವ ಗಜಾಷ್ಟಕ ಕೃತಿಯು ಈಗ ಉಪಲಬ್ಧವಿಲ್ಲದಿದ್ದರೂ ಪೂರ್ವದಲ್ಲಿ ಅದು ಆಕಾಲಕ್ಕೆ ಸುಭಗ ಕವಿತಾ ಗುಣದಿಂದ ಕೂಡಿದ ಪ್ರಸಿದ್ಧ ಅಷ್ಟಕ ಕೃತಿಯಾಗಿತ್ತು ಎಂಬುದು ಹುಂಚ ಶಾಸನದಲ್ಲಿಯ

'ಏವೇಳ್ವುದೊ ಶಿವಮಾರಮ

ಹೀವಳಯ್ಯಾಧಿಪನ ಸುಭಗ ಕವಿತಾಗುಣಮಂ

ಭೂವಳಯದೊಳ್ಗಜಾಷ್ಟಕ

ಮೋವನಿಗೆಯುಮೊನೆಕೆವಾಡುಮಾದುದೇ ಪೇಳ್ಗುಂ' ಎಂಬ ಉಲ್ಲೇಖದಿಂದ ತಿಳಿದು ಬರುತ್ತದೆ. ಗಂಗರಸ ಸೈಗೊಟ್ಟ ಶಿವಮಾರನ ಗಜಾಷ್ಟಕ ಎಂಬ ಒನಕೆವಾಡು ದೇಸೀ ಕಾವ್ಯದ ಪ್ರಸ್ತಾಪದಿಂದ ಈ ಕಾವ್ಯ ಜಾತಿಯ ಪದ್ಯರಚನೆ ಕನ್ನಡದಲ್ಲಿ ಕೆಲವು ಕಾಲದಿಂದ ನಡೆಯುತ್ತಿದ್ದು ಕವಿಗಳ ಹಾಗೂ ಲಾಕ್ಷಣಿಕರ ಮನ್ನಣೆಗೂ ಪಾತ್ರವಾಗಿದ್ದಿತು. ಒನಕೆವಾಡು ಎನಿಸಿಕೊಂಡ ಗಜಾಷ್ಟಕವು ಕುಟ್ಟುವಾಗ ಹಾಡಲು ಬಳಸುತ್ತಿದ್ದ ತ್ರಿಪದಿ ರೂಪವಾಗಿದ್ದಿರಬೇಕು ಎಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಮಂಣೆ ಶಾಸನದಲ್ಲಿಯ ವಿವರದ ಪ್ರಕಾರ ಶಿವಮಾರನು 'ಗಜಮತ ಕಲ್ಪನಾ ಸೇತುಬಂಧ ಎಂಬ ನಾಟಕಗಳ ಕರ್ತೃ ಎಂಬುದಾಗಿಯೂ ತಿಳಿದು ಬರುತ್ತದೆ. ಕಲ್ಭಾವಿ ಶಾಸನವು ಶಿವಮಾರನನ್ನು ಸಾರಸ್ವತ ಜನಿತ ಭಾಷಾತ್ರಯ ಕವಿತಾ ಲಲಿತ ವಾಗ್ಗಲನಾ ಲೀಲಾ ಲಲಾಮಂ' ಎಂದು ಕೀರ್ತಿಸಿರುವುದರಿಂದ ಈತನ ಗಜಾಷ್ಟಕ- ಕನ್ನಡ, ಗಜಮತ ಕಲ್ಪನಾ- ಸಂಸ್ಕೃತ, ಸೇತುಬಂಧ-ಪ್ರಾಕೃತ ಭಾಷೆಯಲ್ಲಿ ರಚಿತವಾಗಿದ್ದಿರ ಬಹುದೆಂದು ಊಹಿಸಬಹುದಾಗಿದೆ.

೬. **ವಿಜ್ಜಿಕಾ ಅಥವಾ ವಿಜಯಾಂಕ** : (ಕ್ರಿ.ಶ. ೬೫೯) ಬಾದಾಮಿ ಚಾಲುಕ್ಯರಲ್ಲಿ ಪ್ರಸಿದ್ಧನಾದ ಇಮ್ಮಡಿ ಪುಲಕೇಶಿಯ ಸೊಸೆಯೂ ಚಂದ್ರಾದಿತ್ಯ ರಾಜನ ಪತ್ನಿಯೂ ಆಗಿದ್ದ ಈಕೆಯು 'ಕೌಮುದೀಮಹೋತ್ಸವ' ಎಂಬ ನಾಟಕವನ್ನು ಸಂಸ್ಕೃತದಲ್ಲಿ ರಚಿಸಿದ್ದಾಳೆ. ಈಕೆ

ಸಂಸ್ಕೃತದ ಕವಯತ್ರಿಯಾಗಿದ್ದು ಕಾಳಿದಾಸ, ದಂಡಿಗಳ ನಂತರ ವೈದರ್ಭೀ ಶೈಲಿಗೆ ಆದರ್ಶಳಾಗಿದ್ದಳು ಎಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ.

೭. **ನೃಪತುಂಗ** : (ಕ್ರಿ. ಶ. ೮೧೪-೮೭೭) ರಾಷ್ಟ್ರಕೂಟರ ಪ್ರಖ್ಯಾತ ದೊರೆ ನೃಪತುಂಗ ಅಥವಾ ಅಮೋಘವರ್ಷನು 'ಪ್ರಶ್ನೋತ್ತರ ರತ್ನಮಾಲಿಕಾ' ಎಂಬ ಗ್ರಂಥವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾನೆ. ಇದೊಂದು ಧಾರ್ಮಿಕ ಕೃತಿಯಾಗಿದೆ. 'ಮಹಾ ನೃಪತುಂಗ ದೇವನಾದರದೊಳೆಪೇಟ್ದಿ ಮಾರ್ಗ ಗತಿ' ಎಂಬ ಉಲ್ಲೇಖದಿಂದ ಮೊದಮೊದಲು ಕವಿರಾಜ ಮಾರ್ಗವನ್ನು ಈತನೇ ರಚಿಸಿದ್ದಾನೆಂಬ ಅಭಿಪ್ರಾಯ ಇತ್ತು. ಇತ್ತೀಚಿಗೆ ಕೃತಿಯ ಆಂತರಿಕ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಇದರ ಕರ್ತೃ ಶ್ರೀವಿಜಯ ಎಂಬುದನ್ನು ಸಂಶೋಧಕರು ನಿರೂಪಿಸಿದ್ದಾರೆ.

೮. **ಇಮ್ಮಡಿ ಕೀರ್ತಿವರ್ಮ:** (ಕ್ರಿ. ಶ. ೧೧೦೦) ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯ ಮಲ್ಲನ ಮಗನಾದ ಈತನು 'ಗೋವೈದ್ಯ' ಎನ್ನುವ ದನಗಳ ರೋಗಗಳ ಬಗೆಗಿನ ಶಾಸ್ತ್ರ ಕೃತಿಯನ್ನು ರಚಿಸಿದ್ದಾನೆ. ಈತನಿಗೆ ವಿದ್ಯಾರತ್ನ ಎಂಬ ಬಿರುದು ಇತ್ತು. ಪಶುಚಿಕಿತ್ಸೆಗೆ ಸಂಬಂಧಪಟ್ಟ ಮೊತ್ತಮೊದಲ ಕೃತಿ. ಪಶುಗಳಿಗೆ ಬರುವ ಅನೇಕ ಕಾಯಿಲೆಗಳು, ಅವುಗಳಿಗೆ ಪರಿಹಾರ ಯಂತ್ರಗಳನ್ನು ಕಟ್ಟುವುದು, ಬರೆ ಹಾಕುವುದು ಇತ್ಯಾದಿ ವಿಷಯಗಳನ್ನು ಕುರಿತು ಚರ್ಚಿಸಿದ್ದಾನೆ.

೯. **ಮುಮ್ಮಡಿ ಸೋಮೇಶ್ವರ** : (ಕ್ರಿ. ಶ. ೧೧೨೬-೧೧೫೦) ಆರನೆಯ ವಿಕ್ರಮಾದಿತ್ಯನ ಮಗ ಭೂಲೋಕಮಲ್ಲನೆನಿಸಿದ ಮುಮ್ಮಡಿ ಸೋಮೇಶ್ವರನು ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥಚಿಂತಾಮಣಿ ಎನ್ನುವ ವಿಶ್ವಕೋಶವನ್ನು ಮತ್ತು ಬಿಲ್ಹಣನ ವಿಕ್ರಮಾಂಕ ದೇವ ಚರಿತವನ್ನು ಅನುಸರಿಸಿ 'ವಿಕ್ರಮಾಂಕಾಭ್ಯುದಯ' ಎಂಬ ಎರಡು ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಮಾನಸೋಲ್ಲಾಸವನ್ನು ಜ್ಞಾನಕೋಶ, ವಿಶ್ವೋಪಕಾರಕ ಶಾಸ್ತ್ರಗ್ರಂಥ, ಜಗದಾಚಾರ್ಯ ಪುಸ್ತಕವೆಂದು ಕರೆಯಲಾಗಿದೆ. ಐದು ಸಂಪುಟಗಳು ಇದ್ದು ಪ್ರತಿಯೊಂದು ಸಂಪುಟವು ೨೦ ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಸಂಪುಟದಲ್ಲಿ ಸರ್ವರಿಗೂ ಅನ್ವಯಿಸುವ ನೀತಿಗಳೂ ರಾಜನೀತಿಗಳೂ ಇವೆ. ಎರಡನೆಯ ಸಂಪುಟದಲ್ಲಿ ರಾಜವ್ಯವಸ್ಥೆಯ ವಿಚಾರ ಇದೆ. ಮೂರನೆಯ ಸಂಪುಟದಲ್ಲಿ ವಾಸ್ತುಶಿಲ್ಪ, ಚಿತ್ರಲೇಖನ, ತೈಲ ಚಿತ್ರಕಲೆ, ವಿಗ್ರಹ ಕಲೆ, ಗ್ರಹಸ್ಥ ಜೀವನ, ರಾಜಭೋಗ ವಿಚಾರಗಳಿವೆ. ನಾಲ್ಕನೆಯ ಸಂಪುಟದಲ್ಲಿ ಶಸ್ತ್ರ ಪ್ರಾವೀಣ್ಯ, ವಿದ್ಯಾಭ್ಯಾಸ, ಗಜಾಶ್ವವಿದ್ಯೆ, ಗರಡಿಯ ಸಾಧನೆ, ನಾಯಿ ಕೋಳಿ ಸಾಕಣೆ ಕಾವ್ಯ ಸಂಗೀತ ನೃತ್ಯ ಸರಸ ಸಂಭಾಷಣೆ ಮುಂತಾದ ವಿಷಯಗಳ ಶಾಸ್ತ್ರೀಯ ವಿವೇಚನೆ ಇದೆ. ಐದನೆಯ ಸಂಪುಟವು ವಿವಿಧ ಕ್ರೀಡಾ ವಿಷಯಕವಾಗಿದೆ. ಈ ಕೃತಿಯನ್ನು ಸಂಶೋಧಕರು ವಾಸ್ತುಶಿಲ್ಪ ಮತ್ತು ಶಿಲ್ಪ, ಮೂರ್ತಿಕಲೆ ಮತ್ತು ಸಂಗೀತ, ಚಿತ್ರಲೇಖನ ಮುಂತಾದ ಲಲಿತ ಕಲೆಗಳು ಪಾಕಶಾಸ್ತ್ರ, ಬುಡುಬುಡಿಕೆ, ಕೋಳಿಕಾಳಗ, ಸರ್ಪವಿದ್ಯೆ ಮೊದಲಾದ ವಿಷಯಗಳಿಂದ ಕೂಡಿ ಪ್ರಮುಖ ಭಾರತೀಯ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ದ್ರಾವಿಡ ಪ್ರಭಾವಕ್ಕೆ ಯೋಗ್ಯಸ್ಥಾನವನ್ನು ಕೊಟ್ಟಿರುವ

ಸಂಸ್ಕೃತ ಸಾಹಿತ್ಯದ ಮೊತ್ತ ಮೊದಲನೆಯ ಕೃತಿ ಎಂದು ಗುರುತಿಸಿದ್ದಾರೆ. ಸರ್ವರಿಗೂ ರುಚಿಸುವ ವಿಷಯಗಳನ್ನೊಳಗೊಂಡ ಪರಿಪೂರ್ಣ ವಿಶ್ವಕೋಶ ಎಂಬ ಹಿರಿಮೆಗೆ ಪಾತ್ರವಾಗಿದೆ.

೧೦. **ಗಂಗಾದೇವಿ** : (೧೩೫೬-೧೩೭೭) ಸಂಗಮ ವಂಶದ ಬುಕ್ಕರಾಯನ ಮಗ ಕಂಪಣನ ಹೆಂಡತಿಯಾದ ಈಕೆಯು 'ಮಧುರಾ ವಿಜಯ' ಅಥವಾ ವೀರಕಂಪಣರಾಯ ಚರಿತ ಎಂಬ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಚಾರಿತ್ರಿಕ ಧ್ವನಿಯುಳ್ಳ ಕಾವ್ಯವನ್ನು ಚಂಪೂಮಾದರಿಯಲ್ಲಿ ಸಂಸ್ಕೃತದಲ್ಲಿ ರಚಿಸಿದ್ದಾಳೆ. ಈ ಕೃತಿಯು ೯ ಸರ್ಗಗಳನ್ನು ಒಳಗೊಂಡಿದ್ದು ಅನುಷ್ಟುಪ್ ಶ್ಲೋಕದಲ್ಲಿ ರಚಿತವಾಗಿದೆ. ಪತಿ ಕಂಪಣರಾಯನು ಮಧುರೆಯ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡ ವಿವರವನ್ನೇ ವಸ್ತುವಾಗಿರಿಸಿಕೊಂಡಿದೆ. ಈ ಕೃತಿಯು ವಿಜಯ ನಗರ ಸಾಮ್ರಾಜ್ಯವು ತಮಿಳು ದೇಶಕ್ಕೆ ವ್ಯಾಪಿಸಿದ ಕಥೆ ಹಾಗೂ ಅದಕ್ಕೆ ಹಿನ್ನೆಲೆಯಾದ ಸಂದರ್ಭವನ್ನು ವಿವರಿಸುತ್ತದೆ. ಭಾರತದ ಇತಿಹಾಸದಲ್ಲಿಯೇ ಕವಯತ್ರಿಯೊಬ್ಬಳು ಬರೆದ ಪ್ರಪ್ರಥಮ ಸಂಸ್ಕೃತ ಇತಿಹಾಸ ಕಾವ್ಯ ಎಂಬ ಹೆಗ್ಗಳಿಕೆ ಈ ಕೃತಿಗಿದೆ. ಈ ಕೃತಿಯನ್ನು ೧೯೫೭ ರಲ್ಲಿ ಅಣ್ಣಾಮಲೈ ವಿಶ್ವವಿದ್ಯಾನಿಲಯದಿಂದ ಎಸ್. ತಿರುವೆಂಕಟಾಚಲನ್ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ.

೧೧. **ದೇಪರಾಜ** : (ಕ್ರಿ. ಶ. ೧೪೧೦) ಸಂಗಮ ವಂಶಕ್ಕೆ ಸೇರಿದ ಅರಸ ಎಂಬುದು ಈತನ ಕೃತಿಯಲ್ಲಿಯ ಸಂಗಮೇಂದ್ರನ ಕುಲದಿಂಗಡಲಿಗೆ ನೆಱೆದಿಂಗಳೆನಿಪ 'ಕಂಪಸುತನು' ಎಂಬ ಹೇಳಿಕೆಯಿಂದ ತಿಳಿದು ಬರುತ್ತದೆ. ಕ್ರಿ.ಶ. ೧೪೦೬ ರಿಂದ ೧೪೨೨ ರ ವರೆಗೆ ಆಳಿದ ಮೊದಲಿನೆಯ ದೇವರಾಯನೇ ದೇಪರಾಜನಿರಬೇಕೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಈತನು 'ಸೊಬಗಿನ ಸೋನೆ' ಎಂಬ ಸಾಂಗತ್ಯ ಕೃತಿಯನ್ನು 'ಅಮರುಕ' ಎಂಬ ಷಟ್ಪದಿ ರೂಪದ ಶತಕ ಗ್ರಂಥವನ್ನು ರಚಿಸಿದ್ದಾನೆ. ಸೊಬಗಿನ ಸೋನೆ ಕೃತಿಯು ೨೬ ಸಂಧಿಗಳು, ಎರಡು ಸಾವಿರ ಪದ್ಯಗಳಲ್ಲಿ ರಚಿತವಾಗಿದ್ದು ಶೃಂಗಾರ ವಿಷಯವನ್ನು ಒಳಗೊಂಡಿದೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಚ್ಯ ಕಾವ್ಯಮಾಲೆಯಿಂದ ಈ ಕೃತಿ ಪ್ರಕಟವಾಗಿದೆ. ಈತನ ಅಮರುಕ ಕೃತಿಯು ಸಂಸ್ಕೃತದ ಅಮರು ಶತಕ ಕೃತಿಯ ಅನುವಾದವಾಗಿದ್ದು ಪರಿವರ್ಧಿನಿ ಷಟ್ಪದಿಯಲ್ಲಿ ರಚಿತವಾಗಿದೆ.

೧೨. **ಇಮ್ಮಡಿ ಪ್ರೌಢದೇವರಾಯ:** (ಕ್ರಿ. ಶ. ೧೪೨೪-೧೪೪೬) ಸಂಗಮ ವಂಶದ ಪ್ರಸಿದ್ಧ ಅರಸನಾದ ಈತನು ಕಾಮಶಾಸ್ತ್ರಕ್ಕೆ ಸಂಬಂಧಿಸಿದ 'ರತಿರತ್ನಪ್ರದೀಪಕ' ಎಂಬ ಕೃತಿಯನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಜೊತೆಗೆ 'ಮಹಾನಾಟಕ ಸುದಾನಿಧಿ' ಎಂಬ ಚಂಪೂ ಕಾವ್ಯವನ್ನು ರಚಿಸಿದ್ದಾನೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

೧೩. **ಸಾಳುವ ನರಸಿಂಹ** : (ಕ್ರಿ.ಶ. ೧೪೮೫-೧೪೯೧) ಸಾಳುವ ವಂಶದ ಅರಸನಾದ ಈತನು 'ರಾಮಾಭ್ಯುದಯ' ಎನ್ನುವ ಕೃತಿಯನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ.

೧೪. **ಕೃಷ್ಣದೇವರಾಯ** : (ಕ್ರಿ. ಶ. ೧೫೧೦-೧೫೨೯) ತುಳುವ ವಂಶದ ಅರಸನಾದ ಈತನು ಕಾವ್ಯ ನಾಟಕ ಹಾಗೂ ಶಾಸ್ತ್ರ ಕೃತಿಗಳನ್ನು ಸಂಸ್ಕೃತ ಹಾಗೂ ತೆಲುಗು

ಭಾಷೆಗಳಲ್ಲಿ ರಚಿಸಿದ್ದಾನೆ. ಜಾಂಬವತಿ ಪರಿಣಯವು ಐದು ಅಂಕಗಳ ಸಂಸ್ಕೃತ ನಾಟಕವಾಗಿದೆ. ಈ ನಾಟಕದ ವಸ್ತು ಜಾಂಬವಂತನ ಮಗಳು ಜಾಂಬವತಿಗೂ ಕೃಷ್ಣನಿಗೂ ನಡೆದ ವಿವಾಹ. ಇದಲ್ಲದೆ ಉಷಾಪರಿಣಯ, ಮದಾಲಸ ಚರಿತ್ರಂ, ರಸಮಂಜರಿ, ಜ್ಞಾನಚಿಂತಾಮಣಿ, ಸಕಲಕಥಾಸಾರ ಸಂಗ್ರಹ, ಸತ್ಯವಧೂ ಸಾಂತ್ವನ ಇತ್ಯಾದಿ ಕೃತಿಗಳನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾನೆ. ಈತನು ತೆಲುಗಿನಲ್ಲಿ ಅಮುಕ್ತಮಾಲ್ಯ ಅಥವಾ ವಿಷ್ಣು ಚಿತ್ತೀಯ ಎಂಬ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯು ಮೂಲತಃ ಭಕ್ತಿರಸ ಪ್ರಧಾನವಾಗಿದ್ದು ಆಳ್ವಾರ್ ಎನಿಸಿದ ಗೋದಾದೇವಿಯ ಚರಿತ್ರೆಯಾದರೂ ವಿಜಯನಗರದ ಸಮಕಾಲೀನ ಜನಜೀವನ, ಸಾಮಾಜಿಕ, ಆರ್ಥಿಕ, ಸೈನಿಕ ವ್ಯವಸ್ಥೆ, ರಾಜನೀತಿ ಇತ್ಯಾದಿಗಳ ಬಗೆಗೆ ಮಾಹಿತಿಯನ್ನು ಒಳಗೊಂಡಿದೆ; ತೆಲುಗಿನ ಪಂಚಮಹಾಕಾವ್ಯಗಳಲ್ಲಿ ಒಂದು ಎಂಬಂತೆ ಪರಿಗಣಿತವಾಗಿದೆ.

೧೫. **ಮೋಹನಾಂಗಿ** : (ಕ್ರಿ. ಶ. ೧೫೪೫) ಕೃಷ್ಣದೇವರಾಯನ ಮಗಳೂ ಅಳಿಯ ರಾಮರಾಯನ ಹೆಂಡತಿಯಾದ ಈಕೆಯು ಸಂಸ್ಕೃತದಲ್ಲಿ 'ಮಾರೀಚಿಪರಿಣಯ' ಎಂಬ ಪ್ರಣಯ ಕಾವ್ಯವನ್ನು ರಚಿಸಿದ್ದಾಳೆ.

೧೬. **ತಿರುಮಲಾಂಬೆ** : (ಕ್ರಿ.ಶ. ೧೫೪೦-೧೫೪೨) ಕೃಷ್ಣದೇವರಾಯನ ಮಗಳಾದ ಈಕೆಯು 'ವರದಾಂಬಿಕಾ ಪರಿಣಯವನ್ನು' ಸಂಸ್ಕೃತದಲ್ಲಿ ಚಂಪೂ ಪ್ರಕಾರದಲ್ಲಿ ರಚಿಸಿದ್ದಾಳೆ. ಈ ಕಾವ್ಯವು ವಿಜಯನಗರ ಕಾಲದ ಚಾರಿತ್ರಿಕ, ಸಾಮಾಜಿಕ ಹಾಗೂ ರಾಜಕೀಯ ವಿಷಯಗಳನ್ನು ಪ್ರಸ್ತಾಪಿಸುತ್ತದೆ. ಈ ಕೃತಿಯು ಚಾರಿತ್ರಿಕ ಸಂಗತಿಗಳನ್ನು ಕಾವ್ಯಶೈಲಿಯಲ್ಲಿ ನಿರೂಪಿಸಿದೆ.

೧೭. **ಚಾಮರಾಜ ಒಡೆಯರು** : (ಕ್ರಿ. ಶ. ೧೬೧೭-೧೬೩೭) ಇವರು ಮೈಸೂರಿನ ಒಡೆಯರು. ಇವರು ವಾಲ್ಮೀಕಿ ರಾಮಾಯಣದ ಟೀಕೆ ಹಾಗೂ ಸ್ಕಾಂದ ಪುರಾಣದಲ್ಲಿಯ ಬ್ರಹ್ಮೋತ್ತರಖಂಡ ಟೀಕೆ ಇವರು ರಚಿಸಿರುವ ಕೃತಿಗಳು ಎಂದು ಹೇಳಲಾಗಿದೆ. ಆದರೆ ವಾಲ್ಮೀಕಿ ರಾಮಾಯಣದ ಟೀಕೆ ಅಥವಾ ಚಾಮರಾಜೋಕ್ತಿ ವಿಲಾಸವು ವಿರೂಪಾಕ್ಷನೆಂಬುವನು ಬರೆದು ಪ್ರಭುವಿಗೆ ಅಂಕಿತ ಮಾಡಿರುವ ಕೃತಿ ಇದಾಗಿದೆ ಎಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

೧೮. **ಚಿಕ್ಕದೇವರಾಜ ಒಡೆಯರು** : (ಕ್ರಿ.ಶ. ೧೬೭೨-೧೭೦೪) ಇವರು ಚಿಕ್ಕದೇವರಾಜ ಬಿನ್ನಪ, ಭಾಗವತ ಟೀಕೆ, ಭಾರತ ಟೀಕೆ, ಗೀತಗೋಪಾಲ, ಶೇಷಧರ್ಮ ಟೀಕೆ, ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳ ಕರ್ತೃತ್ವದ ಬಗೆಗೆ ಚರ್ಚಿಸುತ್ತ ಸಂಶೋಧಕರು ಗೀತಗೋಪಾಲವನ್ನು ಹೊರತುಪಡಿಸಿ ಉಳಿದ ಕೃತಿಗಳು ಭಾಷಾ ಶೈಲಿ ಮೊದಲಾದುವನ್ನು ಆಧರಿಸಿ ದೊರೆಯೇ ರಚಿಸಿದವುಗಳು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶ್ರೀವೈಷ್ಣವ ತತ್ವಕ್ಕೆ ಅನುಸಾರಿಯಾದ ಭಕ್ತಿಯ ಗೀತೆಗಳನ್ನು ಒಳಗೊಂಡಿರುವ ಗೀತಗೋಪಾಲ ಕೃತಿಯು ತಿರುಮಲಾರ್ಯನು ರಚಿಸಿದ್ದು ಪ್ರಭುವಿನ ಹೆಸರಿನಲ್ಲಿ ಪ್ರಸಿದ್ಧಿಗೊಂಡಿದೆ ಎಂದು ಡಾ. ಎಲ್. ಬಸವರಾಜು ಅವರು ನಿರೂಪಿಸಿದ್ದಾರೆ.

೧೯. **ಚೆಲುವಾಂಬೆ** : (ಕ್ರಿ.ಶ. ೧೭೧೪-೧೭೩೨) ಈಕೆ ಮೈಸೂರು ಒಡೆಯರಲ್ಲಿ ಒಬ್ಬರಾದ ದೊಡ್ಡಕೃಷ್ಣರಾಜರ ಅರಸಿ. ಈಕೆ ಕವಯತ್ರಿಯಾಗಿದ್ದು ೬ ಕೃತಿಗಳನ್ನು ರಚಿಸಿದ್ದಾಳೆ. ೧. ವರನಂದಿಕಲ್ಯಾಣ. ೨. ವೆಂಕಟಾಚಲ ಮಹಾತ್ಮ್ಯಲಾಲೀಪದ. ೩. ಅಲುಮೇಲುಮಂಗೆ ಲಾಲೀಪದ. ೪. ಮಂಗಳಾರತಿ ಪದ. ೫. ತುಲಕಾವೇರೀ ಮಾಹಾತ್ಮ್ಯ. ೬. ಲೀಲಾಶುಕುನ. ಜೊತೆಗೆ ಕೃಷ್ಣ ಕರ್ಣಾಮೃತಕ್ಕೆ ಕನ್ನಡದಲ್ಲಿ ಟೀಕನ್ನು ರಚಿಸಿದ್ದಾಳೆ. ತುಲಕಾವೇರಿ ಮಹಾತ್ಮ್ಯವನ್ನು ಹೊರತು ಪಡಿಸಿ ಉಳಿದ ಕೃತಿಗಳು ಪದ್ಯದಲ್ಲಿ ರಚಿತವಾಗಿವೆ. ಪದ್ಯ ಕಾವ್ಯ ವರನಂದಿ ಕಲ್ಯಾಣ ದೊಡ್ಡ ಗಾತ್ರದ್ದಾಗಿದ್ದು ೭ ಸಂಧಿ, ೮೮೧ ಪದ್ಯಗಳನ್ನು ಒಳಗೊಂಡಿದೆ. ವೆಂಕಟಾಚಲ ಮಹಾತ್ಮ್ಯ ಲಾಲೀ ಪದದಲ್ಲಿ ೨೦೩ ಲಾಲಿಪದಗಳಿವೆ. ಅಲುಮೇಲುಮಂಗೆ ಲಾಲೀ ಪದದಲ್ಲಿ ೩೫ ಚೌಪದಿಗಳಿವೆ. ಈ ಕೃತಿಗಳು ಸಾಂಗತ್ಯ, ಚೌಪದ ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲಿ ಸರಳವಾದ ಶೈಲಿಯಲ್ಲಿ ರಚನೆಯಾಗಿವೆ. ಈಕೆಯ ಕೃತಿಗಳನ್ನು ಎಂ. ಪಿ. ಮಂಜಪ್ಪ ಶೆಟ್ಟಿ ಅವರು ಸಂಪಾದಿಸಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಚ್ಯ ಕಾವ್ಯಮಾಲೆಯಲ್ಲಿ ೧೯೮೪ರಲ್ಲಿ ಪ್ರಕಟಿಸಿದ್ದಾರೆ.

೨೦. **ಮುಮ್ಮಡಿಕೃಷ್ಣರಾಜ ಒಡೆಯರು** : (ಕ್ರಿ. ಶ. ೧೭೯೪-೧೮೬೮) ಕವಿಜನ ಪೋಷಕರಾಗಿದ್ದ ಇವರು ಸ್ವತಃ ಕವಿಗಳಾಗಿ ಕನ್ನಡ ಹಾಗೂ ಸಂಸ್ಕೃತ ಉಭಯ ಭಾಷೆಗಳಲ್ಲಿ ಸು. ೫೦ಕ್ಕೂ ಮೇಲ್ಪಟ್ಟು ಕೃತಿಗಳನ್ನು ರಚನೆ ಮಾಡಿದ್ದಾರೆಂಬ ಹೇಳಿಕೆ ಇದೆ. ಕವಿಚರಿತೆಕಾರ‍ರು ಈ ಗ್ರಂಥಗಳಲ್ಲಿ ಹಲವನ್ನು ಆಸ್ಥಾನ ಪಂಡಿತರುಗಳಿಗೆ ಸೂಚನೆ ಕೊಟ್ಟು ಬರೆಸಿರಬಹುದು ಎಂಬ ಅನುಮಾನವನ್ನು ವ್ಯಕ್ತಪಡಿಸಿದ್ದಾರೆ. ಶ್ರೀನಿವಾಸ ಹಾವನೂರ ಅವರು ಆಕರಗಳ ಹಿನ್ನೆಲೆಯಲ್ಲಿ ಮುಮ್ಮಡಿಯವರೇ ರಚಿಸಿರುವ ಅಧಿಕೃತ ಕೃತಿಗಳು ಎಷ್ಟು ಎಂಬುದನ್ನು ಕರಾರುವಾಕ್ಕಾಗಿ ತಮ್ಮ ಹೊಸಗನ್ನಡದ ಅರುಣೋದಯ ಕೃತಿಯಲ್ಲಿ ಕೊಟ್ಟಿರುತ್ತಾರೆ. ಮುಮ್ಮಡಿಯವರ ಸಾಹಿತ್ಯ ಕೃಷಿಯನ್ನು ದೇವತಾ ಸ್ತುತಿ, ಶಾಸ್ತ್ರ ವಿಷಯ, ಕವಿತೆ, ಪುರಾಣ ಟೀಕೆ, ಮಹಾತ್ಮ್ಯ ಗ್ರಂಥಗಳು, ಕಾವ್ಯ ಗದ್ಯ ಕಥೆಗಳು ನಾಟಕ ಗದ್ಯ ಹಾಗೂ ಚರಿತ್ರೆಗೆ ಸಂಬಂಧಪಟ್ಟವುಗಳು ಎಂದು ವರ್ಗೀಕರಿಸ ಬಹುದು. ವೈವಿಧ್ಯಮಯ ಸಾಹಿತ್ಯ ಕೃತಿಗಳನ್ನು ಆಸ್ಥಾನ ವಿದ್ವಾಂಸರ ಸಹಯೋಗದಿಂದ ರಚಿಸಿದ್ದಾರೆಂಬುದು ಕೃತಿಗಳ ಭಾಷಾಶೈಲಿ, ಅಂತ್ಯಗದ್ಯ, ಉಪಶೀರ್ಷಿಕೆ ಇವೆಲ್ಲ ವಿಧ ವಿಧದಿಂದ ಕೂಡಿರುವುದು ಸಮರ್ಥಿಸುತ್ತದೆ. ಮುಮ್ಮಡಿಕೃಷ್ಣರಾಜ ಒಡೆಯರ ಪ್ರಮುಖ ಕೃತಿಗಳೆಂದರೆ ೧. ಚಾಮುಂಡಾ ಲಘುನಿಘಂಟು ೨. ಶ್ರೀ ತತ್ವನಿಧಿ ೩. ಗ್ರಹಣದರ್ಪಣ ೪. ಸಂಖ್ಯಾರತ್ನಕೋಶ ೫. ಚತುರಂಗ ಸಾರ ಸರ್ವಸ್ವ ೬. ಚಕ್ರಮಂಜರೀ ೭. ನಂಜುಂಡ ಶತಕ ೮. ಸೌಗಂಧಿಕಾ ಪರಿಣಯ ೯. ಆಧ್ಯಾತ್ಮ ರಾಮಾಯಣ ಟೀಕೆ ೧೦. ಕೃಷ್ಣ ಕಥಾಸಾರ ಸಂಗ್ರಹ. ೧೧. ಭಾಗವತಾ ಟೀಕಾ. ಇವರ ಶ್ರೀತತ್ವನಿಧಿ ಆಗಮ, ಶಿಲ್ಪ, ಜೋತಿಷ್ಯ, ಸಂಗೀತ, ಕ್ರೀಡೆ ಮೊದಲಾದ ವಿಷಯಗಳನ್ನೊಳಗೊಂಡ ವಿಶ್ವಕೋಶ ಸಂಕಲನವಾಗಿದೆ. ಸಚಿತ್ರಗ್ರಂಥವಾದ ಇದು ಒಂಬತ್ತು ನಿಧಿಗಳನ್ನೊಳಗೊಂಡ ವಿಶ್ವಕೋಶ. ಈ ಕೃತಿಯನ್ನು ವಿವಿಧ ಸಂಪುಟಗಳಲ್ಲಿ ಹಂಪೆಯ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ.

## ಸ್ಥಳೀಯ ಅರಸರು

ಕನ್ನಡ ನಾಡಿನ ಇತಿಹಾಸದಲ್ಲಿ ಮಧ್ಯಕಾಲೀನ ಯುಗ ಮಹತ್ವಪೂರ್ಣ ತಿರುವಿಗೆ ಕಾರಣವಾಗಿದೆ. ಚಕ್ರವರ್ತಿಯ ಅಧೀನಕ್ಕೆ ಒಳಪಟ್ಟಿದ್ದ ಸಾಮಂತರು, ಮಹಾ ಮಂಡಲೇಶ್ವರರೂ, ಮಂಡಲೇಶ್ವರರೂ ಪ್ರಾದೇಶಿಕವಾಗಿ ರಾಜರು ಎಂದು ಗುರುತಿಸಿಕೊಂಡರು. ಅವಕಾಶಸಿಕ್ಕಿದಾಗ ಅಧೀನತೆಯಿಂದ ಮುಕ್ತರಾಗಲು ಬಯಸಿದ್ದ ಕಾಲವಾಗಿತ್ತು. ವಿಜಯನಗರ ಸಾಮ್ರಾಜ್ಯದ ಕಾಲ ಹಾಗೂ ನಂತರದ ಕಾಲದಲ್ಲಿ ಅಧಿಕ ಸಂಖ್ಯೆಯಲ್ಲಿ ಸ್ಥಳೀಯ ಅರಸರುಗಳು ತಮ್ಮ ತಮ್ಮ ಪ್ರಾದೇಶಿಕ ವ್ಯಾಪ್ತಿಯಲ್ಲಿ ಪ್ರಭುಗಳಾಗಿ ಆಳ್ವಿಕೆ ನಡೆಸಿದ ಸಂಗತಿ ಶಾಸನಗಳು, ಸಾಹಿತ್ಯ ಕೃತಿಗಳು ಕೈಫಿಯತ್ತುಗಳು ಮುಂತಾದ ದಾಖಲೆಗಳ ಮೂಲಕ ತಿಳಿದು ಬರುತ್ತದೆ. ಸ್ಥಳೀಯ ಅರಸರುಗಳು ಸಾಹಿತ್ಯ ಸಂಸ್ಕೃತಿಯನ್ನು ಬೆಳೆಸುವ, ಪೋಷಿಸುವ ಸಲುವಾಗಿ ಕವಿಗಳಿಗೆ ಆಶ್ರಯ ನೀಡಿದ್ದಲ್ಲದೆ ತಾವೂ ಸಹ ಸಾಹಿತ್ಯ ಕೃಷಿ ನಡೆಸಿ ಸಾಹಿತ್ಯದ ಬೆಳೆವಣಿಗೆಗೆ ಕಾರಣ ಕರ್ತರಾಗಿದ್ದಾರೆ. ಇವರು ಬಹುಮಟ್ಟಿಗೆ ವೀರಶೈವ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದಂತೆ ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಸ್ಥಳೀಯ ಅರಸರ ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ವಿವರ ಈ ಕೆಳಕಂಡಂತಿದೆ.

**೨೧. ಉದಯಾದಿತ್ಯ** : (ಕ್ರಿ. ಶ. ೧೧೫೦) ಚೋಳವಂಶಕ್ಕೆ ಸೇರಿದ ಅರಸನೊಬ್ಬನ ಸುತನು ಎಂಬುದು ಈತನ ಕೃತಿಯಲ್ಲಿಯ

> 'ಶ್ರೀನಿಧಿ ಚೋಳಮಹಾ
>
> ದೇವೀನಾಥನ ಸೋಮನಾಥನಾತ್ಮಜನುದಯ
>
> ಕ್ಷ್ಮಾನಾಥಂ ಕನ್ನಡದೊ
>
> ಳ್ಪಾನಲಂಕಾರ ಶಾಸ್ತ್ರಮಂ ವಿರಚಿಸಿದೆಂ'

ಎಂಬ ಹೇಳಿಕೆಯಿಂದ ತಿಳಿದು ಬರುತ್ತದೆ. ಈತನು 'ಉದಯಾದಿತ್ಯಾಲಂಕಾರ' ಎಂಬ ಕಾವ್ಯಮೀಮಾಂಸೆಗೆ ಸಂಬಂಧಿಸ್ಸಿದ ಅಲಂಕಾರ ಕೃತಿಯನ್ನು ರಚಿಸಿದ್ದಾನೆ. ಕೃತಿಯು ೭೨ ಪದ್ಯಗಳನ್ನು ಒಳಗೊಂಡಿದ್ದು ಕಂದಪದ್ಯ ಹಾಗೂ ವೃತ್ತಗಳಲ್ಲಿ ರಚಿತವಾಗಿದೆ. ಕಾವ್ಯಲಕ್ಷಣ, ಕಾವ್ಯ ಭೇದಗಳು, ರೀತಿ, ರಸ, ಕಾವ್ಯಾಂಗಗಳು ಗುಣ ಮತ್ತು ಅಲಂಕಾರಗಳ ಕುರಿತ ಸಂಕ್ಷಿಪ್ತ ವಿವರಣೆ ಇದೆ.

**೨೨. ಮಂಗರಾಜ I** : (ಕ್ರಿ. ಶ. ೧೩೬೦) ದೇವಳಿಗೆ ನಾಡಿನ ಚಿಕ್ಕಮುಗುಳಿ ಪಟ್ಟಣದ ಪ್ರಭುವಾಗಿದ್ದ ಈತನು 'ಖಗೇಂದ್ರಮಣಿದರ್ಪಣ' ಎಂಬ ವಿಷವೈದ್ಯ ಕೃತಿಯನ್ನು ರಚಿಸಿದ್ದಾನೆ. 'ಮಂತ್ರೌಷಧಂಗಳ ಪ್ರಕರಂಗಳಂ ಕೇಳಿ ಬುಧರ್ ಪರಿಭಾವಿಸುತ್ತಿರಲ್ಕೆ ಕನ್ನಡದಿಂ ಸಮಸ್ತ ಜನ ಗೋಚರಮಪ್ಪವೊಲೊಲ್ದು ಪೇಳ್ದುದೈ' ಎಂಬುದಾಗಿ ಹೇಳಿಕೊಂಡಿದ್ದಾನೆ. ಜೈನ ಸಂಪ್ರದಾಯದವನಾದ ಕವಿಯು ವೈದಿಕ ಮೂಲದ ವೈದ್ಯಗ್ರಂಥವನ್ನು ಅನುಸರಿಸಿ

ರಚಿಸಿರುವುದು ಅಚ್ಚರಿಯ ಸಂಗತಿಯಾಗಿದೆ. ಈ ಕೃತಿಯು ಕನ್ನಡದ ವಿಷವೈದ್ಯಗ್ರಂಥಗಳಲ್ಲಿಯೇ ಮಹತ್ತರವಾದುದು. ೧೬ ಅಧಿಕಾರಗಳ ಈ ಕೃತಿಯು ೧೫೦೦ ಪದ್ಯಗಳನ್ನು ಹೊಂದಿದ್ದು ಹಲವಾರು ಬಗೆಯ ವಿಷಗಳ ಸ್ವರೂಪವನ್ನು, ಅವುಗಳಿಗೆ ತಕ್ಕ ಔಷಧೋಪಚಾರಗಳನ್ನು ಒಳಗೊಂಡಿದೆ. ೧೯೪೨ ರಲ್ಲಿಯೇ ಮದ್ರಾಸು ವಿಶ್ವವಿದ್ಯಾನಿಲಯದಿಂದ ಈ ಕೃತಿ ಪ್ರಕಟವಾಗಿದೆ.

೨೩. **ಮಾಧವ :** (ಕ್ರಿ. ಶ. ೧೫೦೦) ಕುಂತಳ ದೇಶದ ಹರಗಟನಾಡ ಹಿರಿಯೂರ ಪ್ರಭುದೇವರಸನ ಮಗ ಮಾಧವನು 'ಮಾಧವಾಲಂಕಾರ' ಎಂಬ ಅಲಂಕಾರ ಶಾಸ್ತ್ರ ಕೃತಿಯನ್ನು ರಚಿಸಿದ್ದಾನೆ. ದಂಡಿಯ ಕಾವ್ಯಾದರ್ಶದ ಭಾಷಾಂತರವಾದ ಈ ಕೃತಿಯು ಮೂರು ಪರಿಚ್ಛೇದಗಳನ್ನು ಒಳಗೊಂಡಿದೆ. ಈ ಕೃತಿಯನ್ನು ಎಚ್. ತಿಪ್ಪೇರುದ್ರಪ್ಪಸ್ವಾಮಿಯವರು ಸಂಪಾದಿಸಿ ಪ್ರಕಟಿಸಿದ್ದಾರೆ.

೨೪. **ವಿರುಪೇಂದ್ರ :** (ಕ್ರಿ. ಶ. ೧೫೧೯) ರಾಜವಂಶಕ್ಕೆ ಸೇರಿದ ಈತನು ಗುರುಭಕ್ತ ಚಾರಿತ್ರ, ತ್ರಿಭುವನ ತಿಲಕ ಕೃತಿಗಳನ್ನು ರಚಿಸಿದ್ದಾನೆ. ಗುರುಭಕ್ತ ಚಾರಿತ್ರವು ಹೆಸರೇ ಸೂಚಿಸುವಂತೆ ಶಿವಭಕ್ತನ ಕಥೆಯನ್ನು ಒಳಗೊಂಡಿದ್ದು ಹದಿನೈದು ಸಂಧಿಗಳಲ್ಲಿ ೭೭೫ ಕುಸುಮ ಷಟ್ಪದಿಗಳಲ್ಲಿ ರಚಿತವಾಗಿದೆ. ತ್ರಿಭುವನ ತಿಲಕ ಕೃತಿಯು ೨೭ ಸಂಧಿಗಳಲ್ಲಿ ೧೫೨೫ ಸಾಂಗತ್ಯ ಪದ್ಯಗಳಲ್ಲಿ ರಚಿತವಾಗಿದೆ. ೬೩ ಮಂದಿ ಶೈವಪುರಾತನರಲ್ಲಿ ಒಬ್ಬನಾದ ಚೇರಮಾಂಕ ನೃಪನ ಚರಿತ್ರೆ ಈ ಕಾವ್ಯದ ವಸ್ತುವಾಗಿದೆ.

೨೫. **ಮೂರನೆಯ ಮಂಗರಸ :** (ಕ್ರಿ.ಶ. ೧೫೦೮) ಈತನು ಕಲ್ಲಹಳ್ಳಿ ರಾಜನಾದ ವಿಜಯಭೂಪಾಲನ ಸುತ. ಶ್ರೀಪಾಲ ಚರಿತೆಯಲ್ಲಿ ತನ್ನನ್ನು 'ಭೂತಳ ಪತಿ' ಎಂದು ಕರೆದು ಕೊಂಡಿರುವುದರಿಂದ ರಾಜನಾಗಿದ್ದ ಎಂಬುದು ವ್ಯಕ್ತವಾಗುತ್ತದೆ. ಈತನು ಒಟ್ಟು ಆರು ಕೃತಿಗಳನ್ನು ವಿವಿಧ ಛಂದೋರೂಪದಲ್ಲಿ ರಚಿಸಿದ್ದಾನೆ. ಇವುಗಳಲ್ಲಿ ಐದು ಕೃತಿಗಳು ಜೈನ ಧಾರ್ಮಿಕ ಕಥೆಗಳನ್ನು ಒಳಗೊಂಡಿದ್ದರೆ ಒಂದು ಅಡುಗೆ ಕಲೆಯನ್ನು ಕುರಿತ ಸೂಪ ಶಾಸ್ತ್ರವಾಗಿದೆ. ಈತನ ಆರು ಕೃತಿಗಳೆಂದರೆ ೧. ನೇಮಿಜಿನೇಶ ಸಂಗತಿ : ೨೨ನೆಯ ತೀರ್ಥಂಕರನಾದ ನೇಮಿನಾಥನ ಜೀವನ ಸಾಧನೆಗಳನ್ನು ಕುರಿತು ಸಾಂಗತ್ಯ ಪ್ರಕಾರದಲ್ಲಿ ೩೫ ಸಂಧಿಗಳ ೫ ಸಾವಿರ ಪದ್ಯಗಳಲ್ಲಿ ರಚಿತವಾಗಿದೆ. ೨. ಸಮ್ಯಕ್ತ್ವಕೌಮುದಿ ವಾರ್ಧಕ ಷಟ್ಪದಿಯಲ್ಲಿ ೧೨ ಸಂಧಿಗಳಲ್ಲಿ ೭೮೭ ಪದ್ಯಗಳನ್ನು ಒಳಗೊಂಡಿದೆ. ೩. ಪ್ರಭಂಜನ ಚರಿತೆ: ಶುಂಭ ದೇಶದ ಭಂಬಾಪುರದ ರಾಜನಾದ ದೇವಸೇನನ ಮಗ ಪ್ರಭಂಜನ ಚರಿತೆ ಸಾಂಗತ್ಯದಲ್ಲಿ ರಚಿತವಾಗಿದೆ. ಪೂರ್ಣಪ್ರಮಾಣದ ಹಸ್ತಪ್ರತಿ ಇಲ್ಲಿಯವರೆವಿಗೂ ದೊರೆತಿಲ್ಲ. ಐದು ಸಂಧಿಗಳವರೆಗೆ ಮಾತ್ರ ಪಾಠದ ಹಸ್ತಪ್ರತಿ ದೊರೆತಿದೆ ಎಂದು ಮೈಸೂರು ಹಾಗೂ ಕರ್ನಾಟಕ ವಿಶ್ವವಿದ್ಯಾಯ ಹಸ್ತ ಪ್ರತಿವಿಭಾಗದ ಸೂಚಿಯಲ್ಲಿ ಹೇಳಲಾಗಿದೆ. ೪. ಜಯನೃಪಕಾವ್ಯ : ಕುರುಜಾಂಗಣ ರಾಜ್ಯದ ರಾಜನಾದ ರಾಜ ಪ್ರಭುದೇವನ ಮಗ ಜಯನೃಪನ ಕಥೆಯನ್ನು ಷಟ್ಪದಿ ರೂಪದಲ್ಲಿ ರಚಿಸಿದ್ದಾನೆ. ೫. ಶ್ರೀಪಾಲಚರಿತೆ : ಪುಂಡರೀಕಿಣಿ ಪುರದ ರಾಜಗುಣಪಾಲ ಮತ್ತು ಅವನ ಸತಿ ಕುಬೇರಶ್ರೀಯವರ ಮಗ

ಶ್ರೀಪಾಲನ ಶೌರ್ಯ ಸಾಹಸಗಳನ್ನು ಕುರಿತು ಸಾಂಗತ್ಯ ಪ್ರಕಾರದಲ್ಲಿ ೧೪ ಸಂಧಿಗಳಲ್ಲಿ ೧೫೨೭ ಪದ್ಯಗಳಲ್ಲಿ ರಚಿಸಿದ್ದಾನೆ. ೬. ಸೂಪಶಾಸ್ತ್ರ : ಅಡುಗೆ ಕಲೆಯನ್ನು ವಿವರಿಸುವ ಗ್ರಂಥ, ಈ ಕೃತಿಯು ಸಂಸ್ಕೃತ ಸೂಪಶಾಸ್ತ್ರದ ಸಂಗ್ರಹ ರೂಪದ ಜೊತೆಗೆ ಕನ್ನಡನಾಡಿನ ಪ್ರಾದೇಶಿಕ ಅಡುಗೆಯ ವೈವಿಧ್ಯತೆಗಳನ್ನು ಒಳಗೊಂಡಿದೆ. ಈತನ ಆರು ಕೃತಿಗಳಲ್ಲಿ ಶ್ರೀಪಭಂಜನ ಚರಿತೆಯನ್ನು ಹೊರತುಪಡಿಸಿ ಉಳಿದ ಕೃತಿಗಳು ಪ್ರಕಟವಾಗಿವೆ.

೨೬. ಅದೃಶ್ಯ ಕವಿ : (ಕ್ರಿ. ಶ. ೧೫೨೫) ಪರಗಣೆಯ ಕೋಲಾರ ಪುರಕೆ ದೇಸಾಯಿಯಾಗಿದ್ದ ಈತನು ಪ್ರೌಢದೇವರಾಯನ ಕಾವ್ಯ ಎಂಬ ಕಾವ್ಯವನ್ನು ರಚಿಸಿದ್ದಾನೆ. ಮುಗ್ಧ ಸಂಗಾರ್ಯ ಪುರಾಣ ಮತ್ತು ಮಲ್ಲೇಶ ಪುರಾಣಗಳನ್ನೂ ರಚಿಸಿದ್ದಾನೆಂದು ತಿಳಿದುಬರುತ್ತದೆ. ಪ್ರೌಢದೇವರಾಯನ ಕಾವ್ಯವು ೨೧ ಸಂಧಿಗಳಲ್ಲಿ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ಮೇಲ್ನೋಟಕ್ಕೆ ಐತಿಹಾಸಿಕ ಕಾವ್ಯದಂತೆ ತೋರಿ ಬಂದರೂ ಹೆಚ್ಚಾಗಿ ನೂತನ ಪುರಾತನ ಶಿವಭಕ್ತರ ಕಥೆಯನ್ನೇ ಒಳಗೊಂಡಿದೆ. ಈ ಕೃತಿಯನ್ನು ಸಂ.ಶಿ.ಭೂಸನೂರ ಮಠ ಅವರು ಸಂಪಾದಿಸಿ ಮುರುಘಾಮಠದ ಮೂಲಕ ೧೯೫೭ರಲ್ಲಿ ಪ್ರಕಟಿಸಿದ್ದಾರೆ.

೨೭. ವೀರಭದ್ರ ನೃಪಾಲ: (ಕ್ರಿ. ಶ. ೧೫೩೦) ರಾಜವಂಶಕ್ಕೆ ಸೇರಿದ ಈತನು ವೀರಭದ್ರವಿಜಯ ಎಂಬ ಚಂಪೂಕಾವ್ಯವನ್ನು ೧೨ ಆಶ್ವಾಸಗಳಲ್ಲಿ ರಚಿಸಿದ್ದಾನೆ. ಈಶ್ವರನ ದ್ವಾದಶಲೀಲಾ ಸ್ವರೂಪವಾದ ವೀರಭದ್ರನ ಮಹತ್ವದರ್ಶನವೇ ಈ ಕೃತಿಯ ವಸ್ತುವಾಗಿದೆ. ಈ ಕೃತಿಯ ಜೊತೆಗೆ ಪಾರ್ವತೀ ವಲ್ಲಭ ಶತಕ, ಉಮಾ ಮಾಹೇಶ್ವರ ಶತಕ, ಪ್ರಾಣನಾಥಶತಕ, ಶ್ರೀಕಂಠ ಸೋಮೇಶ್ವರ ಶತಕ, ಕಂದಶತಕ ಇತ್ಯಾದಿಗಳನ್ನು ಬರೆದಿದ್ದಾನೆ.

೨೮. ಬಯಕಾರ ರಾಮಪ್ಪ : (ಕ್ರಿ. ಶ. ೧೫೫೦) ವಿಜಯನಗರ ಅರಸರ ಕಾಲದಲ್ಲಿ ಕೊಂಡವೀಡು ದುರ್ಗದ ಅಧಿಪತಿಯಾಗಿದ್ದ ಈತನು 'ಸ್ವರಮೇಳ ಕಲಾನಿಧಿ' ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಈ ಕೃತಿಯು ೫ ಅಧ್ಯಾಯಗಳನ್ನು ಒಳಗೊಂಡಿದ್ದು ೩೨೮ ಶ್ಲೋಕಗಳಲ್ಲಿ ರಚಿತವಾಗಿದೆ. ಎರಡು ಸಾವಿರ ವರ್ಷಗಳ ಭಾರತೀಯ ಸಂಗೀತದ ವಿಕಾಸವನ್ನು ವಿಶ್ಲೇಷಿಸುವ ಈ ಕೃತಿ ಆಧುನಿಕ ಕರ್ನಾಟಕ ಸಂಗೀತಕ್ಕೆ ಪ್ರವೇಶಿಕೆಯಾಗಿದೆ.

೨೯. ಸೋಮರಾಜ : (ಕ್ರಿ. ಶ. ೧೫೭೩) ಚೌಟ ರಾಜ ವಂಶಕ್ಕೆ ಸೇರಿದ ಈತನು ಉದ್ಭಟ ಕಾವ್ಯ ಅಥವಾ ಶೃಂಗಾರ ಸಾರ ಎಂಬ ಚಂಪೂ ಕಾವ್ಯವನ್ನು ರಚಿಸಿದ್ದಾನೆ. ಇದು ಉದ್ಭಟದೇವ ಅಥವಾ ಘೂರ್ಜರ ಕುಮಾರಪಾಲ ರಾಜನ ಚರಿತೆಯನ್ನು ಕುರಿತದ್ದಾಗಿದೆ.

೩೦. ಚೆನ್ನನೃಪಾಲ: (ಕ್ರಿ. ಶ. ೧೫೮೦) ಯಳಂದೂರಿನ ಹದಿನಾಡು ಅರಸು ಮನೆತನದ ಈತನು ವೈದ್ಯಸಾರ ಸಂಗ್ರಹ ಎಂಬ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಯನ್ನು ರಚಿಸಿದ್ದಾನೆ.

೩೧. ಶೃಂಗಾರ ಕವಿ: (ಕ್ರಿ. ಶ. ೧೬೦೦) ರಸಿವಾಳಿಗೆ ಪ್ರಭುವಾದ

ಬೊಮ್ಮರಸನಾಯಕನ ಮಗ ಶೃಂಗಾರ ಕವಿಯು ಕರ್ಣಾಟಕ ಸಂಜೀವನ ಎಂಬ ಅಟಿ ಕುಳ ಕ್ಷಳಗಳನ್ನುಳ್ಳ ಕನ್ನಡ ಶಬ್ದಗಳ ನಿಘಂಟು ಕೃತಿಯನ್ನು ರಚಿಸಿದ್ದಾನೆ. ವಾರ್ಧಕ ಷಟ್ಪದಿಯಲ್ಲಿ ೩೫ ಪದ್ಯಗಳನ್ನು ಇದು ಒಳಗೊಂಡಿದೆ.

೩೨. **ಹಿರಿಯ ವೆಂಕಟಪ್ಪನಾಯಕ** : (ಕ್ರಿ. ಶ. ೧೫೮೩-೧೬೩೦) ಕೆಳದಿ ಅರಸರಲ್ಲಿ ಒಬ್ಬನಾದ ಈತನು ೧. ಶಿವಗೀತಾವ್ಯಾಖ್ಯಾನ ೨. ವೀರ ಮಾಹೇಶ್ವರಾಚಾರ ಸುಧಾವಾರ್ಧಿ ೩. ತತ್ವಾಧಿಕಾರ ನಿರ್ಣಯಂ ೪. ಶಿವಾಷ್ಟಪದೀ ಎಂಬ ಕೃತಿಗಳನ್ನು ರಚಿಸಿದ್ದಾನೆ.

೩೩. **ಮುಮ್ಮಡಿ ತಮ್ಮೇಗೌಡ** : (ಕ್ರಿ. ಶ. ೧೬೦೫-೧೬೪೨) ಸುಗಟೂರು ಅರಸುಮನೆತನಕ್ಕೆ ಸೇರಿದ ಈತನು ಕನ್ನಡ ಸಂಸ್ಕೃತ ತೆಲಗು ಭಾಷೆಗಳಲ್ಲಿ ಕೃತಿಗಳನ್ನು ರಚಿಸಿರುವುದಾಗಿ ತಿಳಿದು ಬಂದಿದೆ. ಕನ್ನಡದಲ್ಲಿ ಶಂಕರಸಂಹಿತೆ ಕೃತಿ ಹಾಗೂ ನಂದಿನಾಥ ಚರಿತೆ ಎಂಬ ಯಕ್ಷಗಾನ ರೂಪದ ಕೃತಿಗಳನ್ನು ರಚಿಸಿದ್ದಾನೆ. ಶಂಕರ ಸಂಹಿತೆ ಕೃತಿಯು ೭ ಕಾಂಡ ೮೦ ಸಂಧಿಗಳನ್ನು ಒಳಗೊಂಡಿದ್ದು ೪೧೦೦ಕ್ಕೂ ಹೆಚ್ಚಿನ ಪದ್ಯಗಳು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿವೆ. ಕೌಮುದೀವ್ಯಾಖ್ಯಾನ ಹಾಗೂ ರಸಿಕ ಮನೋರಂಜನೆ ಕೃತಿಗಳನ್ನು ಸಂಸ್ಕೃತ ಭಾಷೆಯಲ್ಲಿಯೂ, ರಾಜೇಂದ್ರ ಚೋಳಚರಿತೆ ಕುಮಾರಾರ್ಜುನೀಯ, ಸೌಂದರೇಶ ಚರಿತ್ರೆಗಳನ್ನು ತೆಲುಗು ಭಾಷೆಯಲ್ಲಿ ಬರೆದಿರುವುದಾಗಿ ತಿಳಿದು ಬಂದಿದೆ.

೩೪. **ಮುಮ್ಮಡಿ ಚಿಕ್ಕಭೂಪಾಲ** : (ಕ್ರಿ. ಶ. ೧೬೩೫) ಬಿಜ್ಜಾವರದ ಮಹಾನಾಡು ಪ್ರಭುಗಳಲ್ಲಿ ಒಬ್ಬನಾದ ಮುಮ್ಮಡಿ ಚಿಕ್ಕ ಭೂಪಾಲನು ಸಂಸ್ಕೃತ ಭಾಷೆಯಲ್ಲಿ ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ 'ಅಭಿನವ ಭರತ ಸಾರ ಸಂಗ್ರಹ' ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯಲ್ಲಿ ವಾದ್ಯಾಧ್ಯಾಯ ಮತ್ತು ಗೀತಾಧ್ಯಾಯ ಎಂಬ ಎರಡು ಅಧ್ಯಾಯಗಳಿವೆ. ಪ್ರಥಮಾಧ್ಯಾಯವು ೮೬೪ ಶ್ಲೋಕಗಳನ್ನು ಗೀತಾಧ್ಯಾಯವು ೧೩೫೩ ಶ್ಲೋಕಗಳನ್ನು ಅನುಷ್ಟುಪ್ ಛಂದಸ್ಸಿನಲ್ಲಿ ಒಳಗೊಂಡಿದೆ. ಈ ಕೃತಿಯನ್ನು ೧೯೬೦ರಲ್ಲಿ ಆರ್. ಸತ್ಯನಾರಾಯಣ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ.

೩೫. **ಕೆಳದಿ ಹಿರಿಯ ಬಸಪ್ಪನಾಯಕ** : (ಕ್ರಿ. ಶ. ೧೬೬೮-೧೭೧೫) ಕೆಳದಿ ಅರಸರಲ್ಲಿ ಪ್ರಸಿದ್ಧನಾದ ಈತನು ಬಹುವಿದ್ಯಾ ಪಾರಂಗತ ಹಾಗೂ ಉಭಯ ಭಾಷಾ ಕವಿಯಾಗಿದ್ದಾನೆ. ಈತನ ಶಿವತತ್ವ ರತ್ನಾಕರ ಕೃತಿಯು ಸಂಸ್ಕೃತದಲ್ಲಿ ರಚಿತವಾಗಿರುವ ಒಂದು ವಿಶ್ವಕೋಶ ಕೃತಿಯಾಗಿದೆ. ಈ ಕೃತಿಯು ಒಂಬತ್ತು ಕಲ್ಲೋಲಗಳಿಂದಲೂ ನೂರಾ ಎಂಟು ತರಂಗಗಳಿಂದಲೂ ಕೂಡಿರುವ ಬೃಹತ್ ಕೃತಿಯಾಗಿದೆ; ಹದಿಮೂರು ಸಾವಿರಕ್ಕೂ ಹೆಚ್ಚಿನ ಶ್ಲೋಕಗಳನ್ನು ಒಳಗೊಂಡಿದೆ. ವೇದ ಮತ್ತು ಆಗಮಗಳಲ್ಲಿ ಪ್ರತಿಪಾದಿತವಾಗಿರುವ ದರ್ಶನ, ಕಲೆ, ಲೌಕಿಕ ಶಾಸ್ತ್ರಗಳು ಹಾಗೂ ಕೆಳದಿ, ವಿಜಯನಗರ ರಾಜಮನೆತನಕ್ಕೆ ಸಂಬಂಧಿಸಿದ ಐತಿಹಾಸಿಕ ವಿವರಗಳನ್ನು ಒಳಗೊಂಡಿದೆ. ಈ ವಿಶ್ವಕೋಶದಲ್ಲಿ ಆಗಮಗಳು, ದರ್ಶನಗಳು, ಸಂಗೀತ, ಚಿತ್ರಕಲೆ, ಶಿಲ್ಪಕಲೆ, ನಗರ ನಿರ್ಮಾಣ ಪರಿಸರ ಶಾಸ್ತ್ರ , ಆಯುರ್ವೇದ, ಧನುರ್ವೇದ, ಯುದ್ಧವಿದ್ಯೆ, ಐಂದ್ರಜಾಲಿಕ, ರಾಜನೀತಿ, ಲೋಕನೀತಿ,

ಕಾಮಶಾಸ್ತ್ರ ಇತ್ಯಾದಿ ವಿವರಗಳನ್ನು ಸಂಗ್ರಹಿಸಿ ನಿರೂಪಿಸಿಲಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಸ್ಥಳೀಯ ಅರಸರಿಂದ ರಚಿತವಾದ ಮಹತ್ವಪೂರ್ಣ ಕೃತಿಯಾಗಿದೆ. ಬಸಪ್ಪ ನಾಯಕನು ಸುಭಾಷಿತ ಸುರಧ್ರುಮ ಎಂಬ ನೀತಿಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಸೂಕ್ತಿಸುಧಾಕರ ಎಂಬ ದ್ವಿಭಾಷಾಕೃತಿಯನ್ನೂ ರಚಿಸಿದ್ದು ಈ ಕೃತಿಯಲ್ಲಿ ಕನ್ನಡ ಮತ್ತು ಸಂಸ್ಕೃತಗಳ ಮಿಶ್ರಣವಿದ್ದು ಸಂಸ್ಕೃತ ಸುಭಾಷಿತಗಳ ಕನ್ನಡ ವ್ಯಾಖ್ಯಾನವಾಗಿದೆ.

೩೬. **ಸೋದೆಯ ಸದಾಶಿವರಾಯ** : (ಕ್ರಿ. ಶ. ೧೬೭೪-೧೬೯೭) ಸ್ವಾದಿ ಅರಸುಮನೆತನದ ಅರಸುಗಳಲ್ಲಿ ಅತ್ಯಂತ ಪ್ರಸಿದ್ಧನಾದ ಈತನು ಕವಿಯೂ ಸಂಗೀತ ಕಾರನೂ ಆಗಿದ್ದು ಸಾಹಿತ್ಯ ಮತ್ತು ಸಂಗೀತ ಕ್ಷೇತ್ರಗಳಿಗೆ ಸಂಬಂಧಿಸಿದ ಹಾಗೆ ಮಹತ್ತರವಾದ ಕೃತಿಗಳನ್ನು ರಚಿಸಿದ್ದಾನೆ. ಇಲ್ಲಿಯ ವರೆವಿಗೂ ಕಂದ, ವೃತ್ತ, ಷಟ್ಪದಿಗಳಲ್ಲಿರುವ 'ಸದಾಶಿವನೀತಿಯೊಂದೇ' ಈತನ ಕೃತಿಯೆಂದು ಭಾವಿಸಲಾಗಿತ್ತು. ಆದರೆ ಡಾ. ಬಿ.ಆರ್. ಹಿರೇಮಠ ಅವರಿಗೆ ದೊರೆತ ತಾಳೆಗರಿಯ ಹಸ್ತಪ್ರತಿಯಲ್ಲಿ ಸದಾಶಿವರಾಯನು ಬರೆದಿರುವ ಅಧಿಕ ಸಂಖ್ಯೆಯ ಹೊಸಕೃತಿಗಳು (ಒಂದೇ ಹಸ್ತ ಪ್ರತಿ ಕಟ್ಟಿನಲ್ಲಿ) ಬೆಳಕಿಗೆ ಬಂದಂತಾಗಿವೆ. ಹೊಸಕೃತಿಗಳನ್ನೊಳಗೊಂಡ ಹಾಗೆ ಒಟ್ಟ ಹದಿನೆಂಟು ಕೃತಿಗಳನ್ನು ಸೋದೆಯ ಸದಾಶಿವರಾಯನು ಬರೆದಿದ್ದಾನೆಂಬುದು ಮಹತ್ತರವಾದ ಸಂಗತಿಯಾಗಿದೆ. ಕೃತಿಗಳ ವಿವರ ಇಂತಿದೆ. ೧. ಸದಾಶಿವನೀತಿ. ೨. ಸ್ವರವಚನಗಳು : ಮಳೆಯ ಗುರು ನಂದೀಶ, ಗುರುನಂದಯ್ಯ ಅಂಕಿತದಲ್ಲಿ ಬರೆದ ೧೬೦ ಸ್ವರವಚನಗಳು ಇಲ್ಲಿವೆ. ಇವುಗಳಲ್ಲಿ ಸಾಹಿತ್ಯ, ಸಂಗೀತ ಹಾಗೂ ಐತಿಹಾಸಿಕ ವಿಷಯಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಒಳಗೊಂಡಿವೆ. ೩. ಸಮಸ್ಯಾಪೂರ್ಣ ವೃತ್ತ-ಕಂದ : ೩೪ ಪದ್ಯಗಳಲ್ಲಿ ಶಿವಶರಣರ ಸ್ತುತಿಯನ್ನು ಒಳಗೊಂಡಿದೆ. ೪. ರಾಗಮಾಲಿಕೆ : ಇದೊಂದು ಲಘುಕೃತಿಯಾಗಿದ್ದು ಮೂರು ನುಡಿಗಳಲ್ಲಿ ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒಳಗೊಂಡಿದೆ. ೫. ಪಂಚವಿಂಶತಿ ಲೀಲೆಯ ರಗಳೆ : ಶಿವನ ೨೫ ಲೀಲೆಗಳ ವರ್ಣನೆಯನ್ನೊಳಗೊಂಡಿದೆ. ತ್ರಿವಿಧಿ: ೨೫ ಪದ್ಯಗಳಲ್ಲಿ ಶಿವಭಕ್ತಿಯ ಪ್ರತಿಪಾದನೆಯ ವಿಷಯ ಇದೆ. ೭. ಉಳುವೆಯ ಮಹಾತ್ಮೆ : ೭೩ ಪದ್ಯಗಳಿದ್ದು ವೃತ್ತ, ಕಂದ, ಶ್ಲೋಕ, ಷಟ್ಪದಿಗಳಲ್ಲಿ ರಚಿತವಾಗಿದೆ. ಕಲ್ಯಾಣ ಕ್ರಾಂತಿಯ ತರುವಾಯದ ಶಿವಶರಣರ ದಂಡಿನ ದಾರಿಯನ್ನು ಮಹಾಮನೆ ಉಳುವೆಯಲ್ಲಿ ಚಾರಿತ್ರಿಕ ಸಂಗತಿಗಳನ್ನು ಒಳಗೊಂಡಿದೆ. ೮. ಜೋಗುಳಪದ : ಗಂಡು ಜೋಗುಳ ಪದ ಹೆಣ್ಣು ಜೋಗುಳ ಪದ ; ಎರಡೂ ಜೋಗುಳ ಪದಗಳು ಕ್ರಮವಾಗಿ ೨೫ ನುಡಿಗಳು ಹಾಗೂ ೩೫ ನುಡಿಗಳನ್ನು ಒಳಗೊಂಡಿವೆ. ೯. ನವರಸ ಜಕ್ಕಿಣಿ : ಸಂಗೀತ ಪ್ರಧಾನವಾದ ಒಂಬತ್ತು ಹಾಡುಗಳನ್ನು ಒಳಗೊಂಡಿದೆ. ೧೦. ಪಂಚವಿಂಶತಿ ಲೀಲೆಗಳ ಮೂಲಪದ್ಯ: ಮೂವತ್ತು ಪದ್ಯಗಳಲ್ಲಿ ಶಿವನ ೨೫ ಲೀಲೆಗಳ ವಿವರಣೆ ಇದೆ. ೧೧. ಜಾವಡಿ: ಶಿವಭಕ್ತಿಯನ್ನು ನಿರೂಪಿಸುವ ಕೃತಿ. ೧೨. ಭಿಕ್ಷಾಟನ ಲೀಲೆಯ ಕಂದ : ಶಿವ ೨೫ ಲೀಲೆಗಳಲ್ಲಿ ಒಂದಾದ ಭಿಕ್ಷಾಟನಾ ಲೀಲೆಯನ್ನು ೧೯ ಕಂದ ಪದ್ಯ ಹಾಗೂ ೭ ಶ್ಲೋಕಗಳಲ್ಲಿ ವಿವರಿಸಲಾಗಿದೆ. ೧೩. ಖಡ್ಗ ಪ್ರಬಂಧ : ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ ಕೃತಿ. ೧೪. ಮಂಗಲಾಷ್ಟಕ : ಶಿವನ ಹಾಗೂ ವಿನಾಯಕನನ್ನು ಕುರಿತ ಮೂರು ಮಂಗಲಾಷ್ಟಕಗಳು

ವೃತ್ತಗಳಲ್ಲಿ ರಚನೆಯಾಗಿವೆ. ೧೫. ಪ್ರಭುಲಿಂಗ ಲೀಲೆಯ ಜಾವಡಿ : ಸೂತ್ರದ ಗೊಂಬೆಯಾಟದ ಕೃತಿ. ಮಾಯೆಯನ್ನು ಗೆಲ್ಲಿದಮಾಯ ಕೋಲಾಹಲನೂ ಮದ್ದಳಿಗನೂ ಆದ ಅಲ್ಲಮನ ವೃತ್ತಾಂತ ಇದೆ. ೧೬. ಮಹಾಚದುರಂಗ ಲಕ್ಷಣ : ಸೋದೆಯ ಅರಸರು ಆಡುತ್ತಿದ್ದ ಚದುರಂಗ ಆಟದ ಸ್ವರೂಪ ಹಾಗೂ ಆಟದ ಕ್ರಮಗಳನ್ನು ಮೊದಲು ಗದ್ಯದಲ್ಲಿ ವಿವರಿಸಿ ನಂತರ ಈ ವಿಷಯವನ್ನೇ ೯ ವಾರ್ಧಕ ಷಟ್ಪದಿಗಳಲ್ಲಿ ವಿವರಿಸಲಾಗಿದೆ. ೧೭. ಕಲಹಕೇತಯ್ಯಗಳ ಲಕ್ಷಣ : ಗದ್ಯ ಕೃತಿಯಾಗಿದ್ದು ಕಲಹಕೇತಯ್ಯನು ಬ್ರಹ್ಮಯ್ಯನಿಗೆ ಒಲಿದ ಕಥೆ ಇದೆ. ೧೮. ಕಂದಪದ್ಯಗಳು : ಅರಸನ ಈ ಕೃತಿಗಳಲ್ಲಿ ಸ್ವಾದಿ ಅರಸುಮನೆತನದ ರಾಜಕೀಯ, ಧಾರ್ಮಿಕ, ಸಂಗೀತ ಹಾಗೂ ಸಾಹಿತ್ಯಕ ವಿಷಯಗಳ ಬಗೆಗೆ ವಿಪುಲವಾದ ಮಾಹಿತಿ ಇದೆ.

೩೭. **ಹಾಗಲವಾಡಿ ಸಿದ್ಧರಾಮಪ್ಪನಾಯಕ** : (ಕಾಲ. ಕ್ರಿ.ಶ. ೧೭೦೦) ಹಾಗಲವಾಡಿ ಪಾಳೇಗಾರರ ಮನೆತನಕ್ಕೆ ಸೇರಿದವನಾದ ಈತನು 'ಮಹಾನುಭಾವ ಪ್ರಕಾಶಿಕೆ' ಎಂಬ ಗದ್ಯ ಗ್ರಂಥವನ್ನು ರಚಿಸಿದ್ದಾನೆ. ಈ ಗ್ರಂಥದ ಆದಿಯಲ್ಲಿ ಹಾಗಲವಾಡಿ ಸಿದ್ಧರಾಮಪ್ಪ ನಾಯಕರು ನಿರೂಪಿಸಿದ ಮಹಾನುಭಾವ ಪ್ರಕಾಶಿಕೆ ಎಂದಿದೆ. ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ ಸಂಪಾದಕರು ಕೃತಿಯ ಆದಿ ಅಂತ್ಯವನ್ನು ಪರಿಶೀಲಿಸಿ ಹಾಗಲವಾಡಿ ವೀರಶೈವ ರಾಜಮನೆತನಕ್ಕೆ ಸೇರಿದ ಸಿದ್ಧರಾಮಪ್ಪ ನಾಯಕನಿಂದ ಈ ಕೃತಿ ರಚಿಸಲ್ಪಟ್ಟಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

೩೮. **ಇಮ್ಮಡಿ ಮುದಿಯಪ್ಪ ನಾಯಕ** : (ಕ್ರಿ. ಶ. ೧೭೨೮) ಹಾಗಲವಾಡಿ ಅರಸುಮನೆತನಕ್ಕೆ ಸೇರಿದ ಈತನು ಏಳುನೂರು ತತ್ತ್ವ ಪ್ರಧಾನವಾದ ಸ್ವರ ವಚನಗಳನ್ನು 'ಶ್ರೀಗುರು ಸಿದ್ಧರಾಮ' ಎಂಬ ಅಂಕಿತದಲ್ಲಿ ರಚಿಸಿರುವುದಾಗಿ ತಿಳಿದು ಬರುತ್ತದೆ. ಈ ಸ್ವರವಚನಗಳು ಉಪಲಬ್ಧವಿಲ್ಲ.

೩೯. **ಹಾಗಲವಾಡಿ ಮುದ್ವೀರಪ್ಪನ ಮಗಳು** : (ಕ್ರಿ. ಶ. ೧೭೫೦) ಹೆಸರು ಲಭ್ಯವಿಲ್ಲದ ಈಕೆ ಗುರು ಸಂಗಮೇಶ್ವರ ಲಿಂಗವೇ ಅಂಕಿತದಲ್ಲಿ ಸ್ವರವಚನಗಳನ್ನು ಬರೆದಿರುವುದಾಗಿ ತಿಳಿದು ಬರುತ್ತದೆ.

೪೦. **ಕಳಲೆಯ ವೀರರಾಜ** : (ಕ್ರಿ. ಶ. ೧೭೧೪-೨೪) ಕಳಲೆ ಅರಸುಮನೆತನಕ್ಕೆ ಸೇರಿದ ಈತನು ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಕಲ ವೈದ್ಯ ಸಂಹಿತ ಸಾರಾರ್ಣವ ಎನ್ನುವ ಶಾಸ್ತ್ರಕೃತಿಯನ್ನು ರಚಿಸಿದ್ದಾನೆ. ಈ ಕೃತಿಯ ರಚನೆಯ ಸಂದರ್ಭದಲ್ಲಿ ಮಹಾ ಸಂಹಿತಾ ದುಗ್ಧಂ ರತ್ನಾಕರ, ಭೋಜರಾಜ ಸಂಹಿತೆ, ವೈದ್ಯ ಕಲ್ಪತರು ಇತ್ಯಾದಿ ವೈದ್ಯ ಶಾಸ್ತ್ರ ಕೃತಿಗಳನ್ನು ಆಕರವಾಗಿ ಬಳಸಿ ಕೊಂಡಿದ್ದಾನೆ. ಸಂಸ್ಕೃತದ ವೈದ್ಯಸಾರ ಸಂಗ್ರಹವ ಮೂಲ ಸಂಸ್ಕೃತ ಶ್ಲೋಕಗಳನ್ನು ಬಿಟ್ಟು ವ್ಯಾಖ್ಯಾನವಷ್ಟನ್ನೇ ಸ್ವಲ್ಪವೂ ಬಿಡದಂತೆ ಬಳಸಿಕೊಂಡು ಕೃತಿರಚಿಸಿದ್ದಾನೆ. ಈ ಕೃತಿಯಲ್ಲಿ ಪ್ರತಿಯೊಂದು ರೋಗ, ಅದರ ಲಕ್ಷಣ, ಆರೋಗ್ಯದ ಭೇದಗಳು, ಅವಕ್ಕೆ ಔಷಧ ರೂಪವಾಗಿ ಸಂಹಿತೆ, ಕಲ್ಕ, ಕಷಾಯ, ಚೂರ್ಣ ಇತ್ಯಾದಿ

ಪರಿಹಾರ ಕ್ರಮಗಳ ವರ್ಣನೆ ಇದೆ. ಕಳಲೆ ಮನೆತನದ ಇತಿಹಾಸದ ದೃಷ್ಟಿಯಿಂದಲೂ ಈ ಕೃತಿ ಉಪಯುಕ್ತವಾಗಿದೆ. ಈತನು ತೆಲುಗುಭಾಷೆಯಲ್ಲಿ 'ಆಂಧ್ರ ವಚನ ಭಾರತಮು' ಎಂಬ ಗದ್ಯನಿಬದ್ಧವಾದ ಮಹಾ ಕಾವ್ಯವನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ.

**೪೧. ನಾಲ್ಕನೆಯ ನಂಜರಾಜ** : (ಕ್ರಿ. ಶ. ೧೭೩೪-೧೭೬೫) ಈತನನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಳಲೆ ನಂಜರಾಜಯ್ಯನೆಂದೇ ಗುರುತಿಸಲಾಗಿದೆ. ಈತನು ರಚಿಸಿರುವ ಕೃತಿಗಳ ಸಂಖ್ಯೆಯ ಬಗೆಗೆ ವಿದ್ವಾಂಸರಲ್ಲಿ ಗೊಂದಲ ಇದೆ. ಕವಿರಚರಿತೆಕಾರರು ಈತನು ಬರೆದಿರುವ ೧೭ ಕೃತಿಗಳನ್ನು ಹೆಸರಿಸಿದ್ದರೂ ಕೃತಿಗಳ ಒಟ್ಟು ಸಂಖ್ಯೆಯ ಬಗೆಗೆ ಏನನ್ನೂ ಹೇಳಿಲ್ಲ. ಸದ್ಯಕ್ಕೆ ನಂಜರಾಜಯ್ಯನು ಬರೆದಿರುವ ೧೮ ಕೃತಿಗಳ ಹಸ್ತಪ್ರತಿಗಳು ಲಭ್ಯವಿವೆ. ಈತನ ಸಾಹಿತ್ಯ ಕೃಷಿಯನ್ನು ಮೂರು ಗುಂಪುಗಳಾಗಿ ವರ್ಗೀಕರಿಸಬಹುದು. ೧. ಕ್ಷೇತ್ರ ಮಹಾತ್ಮ್ಯಗಳು. ೨. ಶಿವಭಕ್ತರ ಮಹಾತ್ಮ್ಯ ಚರಿತ್ರೆಗಳು ೩. ಟೀಕೆ-ವ್ಯಾಖ್ಯಾನಗಳು.

**I. ಕ್ಷೇತ್ರ ಮಹಾತ್ಮ್ಯಗಳು** : ೧. ಕಕುದ್ಗಿರಿ ಮಹಾತ್ಮ್ಯ - ಇಪ್ಪತ್ತು ಅಧ್ಯಾಯ. ೨. ಗರಳಪುರಿ ಮಹಿಮಾದರ್ಶ– ಹನ್ನೆರಡು ಅಧ್ಯಾಯ. ೩. ಭದ್ರಗಿರಿ ಮಹಾತ್ಮ್ಯ - ೧೬ ಅಧ್ಯಾಯ. ೪. ಸೇತುಮಹಿಮಾದರ್ಶ - ೫೨ ಅಧ್ಯಾಯ. ೫. ಕಾಶಿಮಹೀಮಾರ್ಥ ದರ್ಪಣ.

**II. ಶಿವಭಕ್ತರ ಮಹಾತ್ಮ್ಯ ಚರಿತ್ರೆಗಳು** : ೧. ಶಿವಭಕ್ತ ವಿಲಾಸ ದರ್ಪಣ– ೯೦ ಅಧ್ಯಾಯ. ೨. ಭಕ್ತವಿಲಾಸದರ್ಪಣ ೩. ಹರದತ್ತಚಾರ್ಯ ಚಾರಿತ್ರ - ೧೦ ಅಧ್ಯಾಯ. ೪. ಹಾಲಾಸ್ಯಮಹಾತ್ಮ್ಯ- ೭೧ ಅಧ್ಯಾಯ ೫. ಅರವತ್ತು ಮೂವರ ತ್ರಿವಿಧಿ.

**III. ಟೀಕೆ-ವ್ಯಾಖ್ಯಾನಗಳು** : ೧. ಭಾರತ ತಾತ್ಪರ್ಯ ಟೀಕು. ೨. ಮಾರ್ಕಂಡೇಯ ಪುರಾಣಾರ್ಥ ದೀಪಿಕೆ. ೩. ಶಿವಧರ್ಮೋತ್ತರ ಟೀಕು. ೪. ವಿಘ್ನೇಶ್ವರ ವ್ರತಕಲ್ಪದ ಟೀಕು. ೫. ಶಿವಗೀತೆ. ೬. ಲಿಂಗಪುರಾಣ. ೭. ಹರಿವಂಶ. ಈತನ ಒಟ್ಟು ಕೃತಿಗಳಲ್ಲಿ ಅರುವತ್ತು ಮೂವರ ತ್ರಿವಿಧಿಯನ್ನು ಹೊರತುಪಡಿಸಿ ಉಳಿದ ಕೃತಿಗಳು ಗದ್ಯ ಪ್ರಕಾರದಲ್ಲಿವೆ. ಈತನ ಗದ್ಯ ಕೃತಿಗಳು ಟೀಕು, ವ್ಯಾಖ್ಯಾನ ಸ್ವರೂಪದಲ್ಲಿದ್ದರೂ ಇವು ಬಹುಮಟ್ಟಿಗೆ ಸಂಸ್ಕೃತ ಕೃತಿಗಳ ನೇರಾನುವಾದವೋ ಸಂಗ್ರಹಾನುವಾದವೋ ಆಗಿವೆ. ಈತನ ಲಿಂಗಪುರಾಣ ೧೫೮ ಅಧ್ಯಾಯಗಳುಳ್ಳ ದೊಡ್ಡ ಕೃತಿಯಾಗಿದೆ. ಶೈವ ಧರ್ಮದ ಅನುಯಾಯಿಯಾದ ನಂಜರಾಜನ ಕೃತಿ ಸಮೂಹದಲ್ಲಿ ಶೈವಧರ್ಮಕ್ಕೆ ಹೆಚ್ಚಿನ ಆದ್ಯತೆ ದೊರೆತಿದೆ. ದೇವಚಂದ್ರ ತನ್ನ ರಾಜಾವಳಿ ಕಥೆಯಲ್ಲಿ ನಂಜರಾಜನನ್ನು ಸಂಸ್ಕೃತ, ಕನ್ನಡ, ತೆಲುಗು ಭಾಷೆಗಳಲ್ಲಿ ಕಾವ್ಯರಚನೆಮಾಡಬಲ್ಲ ಶಕ್ತಿಯುಳ್ಳವನೆಂದು ಹೊಗಳಲಾಗಿದೆ. ಈತನು ಸಂಸ್ಕೃತದಲ್ಲಿ 'ಗೀತ ಗಂಗಾಧರ' ಎಂಬ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಗೆ ಶಿವಾಷ್ಟಪದಿ ಎಂಬ ಮತ್ತೊಂದು ಹೆಸರು ಲಭ್ಯವಿದೆ. ಈ ಕೃತಿಯು ಆರು ಸರ್ಗಗಳು ಹಾಗೂ ೨೪ ಅಷ್ಟ ಪದಿಗಳನ್ನು ಒಳಗೊಂಡಿದೆ.

**೪೨. ಚಿನ್ನರಾಜಪ್ಪ** : (ಕ್ರಿ. ಶ. ೧೭೫೦) ಮೈಸೂರು ಅರಸರ ಸಮುದಾಯಕ್ಕೆ

ಸೇರಿದ ಈತನು ವೆಂಕಟೇಶ್ವರ ಶತಕದ ಕರ್ತೃ ಎಂಬುದು ಮೈಸೂರು ಆನೆಗೊಂದಿ ಅರಸಿನವರು ಚೆನ್ನರಾಜಪ್ಪನವರಿಂದ ವಿರಚಿಸಲ್ಪಟ್ಟ ವೆಂಕಟೇಶ್ವರ ಶತಕ ಸಂಪೂರ್ಣ ಎಂಬ ಹೇಳಿಕೆಯಿಂದ ತಿಳಿದು ಬರುತ್ತದೆ.

೪೩. **ಜಾಯಗೊಂಡ II :** (ಕ್ರಿ. ಶ. ೧೭೩೪-೫೮) ಸಿರಸಂಗಿ ಸಂಸ್ಥಾನ ಅಥವಾ ತೊರಗಲ್ ಸೀಮೆಯ ಅರಸನಾಗಿದ್ದ ಈತನು, ಅಪ್ಪಯ್ಯ ದೀಕ್ಷತರು ಸಂಸ್ಕೃತದಲ್ಲಿ ರಚಿಸಿದ್ದ ಅಲಂಕಾರ ಶಾಸ್ತ್ರ ಕೃತಿಯಾದ ಕುವಲಯಾನಂದ ಕೃತಿಯನ್ನು ಸಂಗ್ರಹ ರೂಪದಲ್ಲಿ 'ಕರ್ಣಾಟಕ ಕುವಲಯಾನಂದ' ಹೆಸರಿನಲ್ಲಿ ರಚಿಸಿದ್ದಾನೆ. ನೂರೊಂದು ಅಲಂಕಾರಗಳ ವಿವರಣೆಯನ್ನು ಈ ಕೃತಿಯು ಒಳಗೊಂಡಿದೆ. ಭಾನುದತ್ತನ ಸಂಸ್ಕೃತ ರಸಮಂಜರಿಗ್ರಂಥವನ್ನು ಶೃಂಗಾರ ತಿಲಕ ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾನೆ.

೪೪. **ಮುಮ್ಮಡಿ ಪಾಪನಾಯಕ :** ( ಕ್ರಿ. ಶ. ೧೭೭೦) ಸುರಪುರದ ಪಾಳೇಗಾರನಾಗಿದ್ದ ಈತನು ತೆಲುಗಿನಲ್ಲಿ 'ಭಾರ್ಗವ ಪುರಾಣ' ಎಂಬ ಕೃತಿಯನ್ನು ರಚಿಸಿದ್ದಾನೆ.

೪೫. **೭ನೆಯ ಲಿಂಗರಾಜೇಂದ್ರ ಒಡೆಯ :** (ಕ್ರಿ. ಶ. ೧೮೧೧-೨೦) ಕೊಡಗಿನ ಹಾಲೇರಿ ಅರಸುಮನೆತನದ ದೊರೆಯಾದ ಈತನು ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾನೆ. ಬಸವರಾಜ ಕೃತಿಯನ್ನು ರಚಿಸಿದುದಾಗಿ ತಿಳಿದು ಬರುತ್ತದೆ. ಆದರೆ ಈ ಕೃತಿ ಲಭ್ಯವಾಗಿಲ್ಲ. ಹರ್ಬಟ್ ಮೋಗ್ಲಿಂಗ್‌ನ ಹೇಳಿಕೆಯ ಪ್ರಕಾರ ಈತನು ತನ್ನ ಪತ್ನಿಯರಲ್ಲಿ ಒಬ್ಬಳನ್ನು ಕುರಿತು ಕವಿತೆ ರಚಿಸಿದುದಾಗಿ ತಿಳಿದು ಬರುತ್ತದೆ. ಅರಸುಮನೆತನದವರು ಕವಿಗಳಾಗಷ್ಟೇ ಕಂಡು ಬರುವುದಿಲ್ಲ. ಕೆಲವು ಕಾವ್ಯಗಳ ಹಸ್ತ ಪ್ರತಿಗಳನ್ನು ಸ್ವತಃ ತಾವೇ ಪ್ರತಿಮಾಡಿಕೊಂಡಿರುವುದರ ಬಗೆಗೆ ಹಸ್ತಪ್ರತಿಗಳ ಪುಷ್ಪಿಕೆಗಳಿಂದ ತಿಳಿದು ಬರುತ್ತದೆ. ಪೂರ್ವದ ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಉಳಿಸಿಕೊಂಡು ಬರಲು ಯಾವ ರೀತಿ ಗುರುತರವಾದ ಕಾಳಜಿಯನ್ನು ವಹಿಸಿದ್ದರು ಎಂಬುದು ಇದರಿಂದ ತಿಳಿದು ಬರುತ್ತದೆ. ಅರಸರುಗಳು ಹಸ್ತಪ್ರತಿಗಳನ್ನು ನಕಲು ಮಾಡಿಕೊಂಡಿರುವ ವಿವರ ಈ ಕೆಳಕಂಡಂತಿದೆ.

೧. ಸೋದಾಪುರದ ಮಳೆಯ ಗುರು ನಂದೀಶ್ವರನ ಕರ ಸಂಜಾತರಾದ ಸೋಮಲಿಂಗರಾಜ ಬರೆದ ಎಲ್ಲಾ ಪುರಾತನರ ಬೆಡಗಿನ ವಚನ (ಕ.ವಿ.ವಿ. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಭಂಡಾರ ತಾ.ಪ್ರ. ೩೧೪೭) ಸ್ವಾದಿ ಅರಸುಮನೆತನದ ಸೋಮಲಿಂಗ ರಾಜನು ಬೆಡಗಿನ ವಚನಗಳನ್ನು ಪ್ರತಿಮಾಡಿರುವುದು ಈ ಹೇಳಿಕೆಯಿಂದ ತಿಳಿದು ಬರುತ್ತದೆ.

೨. ಸಿರಸಂಗಿಯ ಜಾಯಪ್ಪ ದೇಸಾಯಿಯು ಜೈಮಿನಿ ಭಾರತವನ್ನು ನಕಲು ಮಾಡಿರುವುದರ ಬಗೆಗೆ 'ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನಶಕ ೧೬೯೩ ಪ್ರವರ್ತಮಾನೆ ಖರನಾಮ ಸಂವತ್ಸರದ ಶ್ರಾವಣ ಶುದ್ಧ ತ್ರಯೋದಶಿ ಗುರುವಾರದಲ್ಲು ಶ್ರೀಮತ್ಸಕಲಗುಣ ಕೋವಿದ ಶಿಖಾಮಣಿ ಮಯೂರಪುರದ ಜಾಯೇಂದ್ರ ಬರೆದ ಜೈಮಿನಿ ಭಾರತ' ಎಂಬ ಹೇಳಿಕೆಯಿಂದ ತಿಳಿದು ಬರುತ್ತದೆ.

೩. ಕಳಲೆ ಕಾಂತರಾಜಯ್ಯನವರ ಸ್ವಹಸ್ತಾಕ್ಷರ : ಶಾಲಿವಾಹನ ಶಕಾಬ್ಧ ೧೭೧೫ ವರುಷ ಸಲ್ಲುವ ವರ್ತಮಾನವಾದ ಪ್ರಮಾದಿಚನಾಮ ಸಂವತ್ಸರದ ಕಾರ್ತೀಕ ಶುದ್ಧ ೧೫ ಯಿಂದು ವಾರ ಕಳಲೆ ಪುರವರಾಧಿಪರಾದ ರಾಜೈಯ್ಯರಸಿನವರ ಪ್ರಪೌತ್ರರಾದ ಕೆಂಜರಾಜೈಯರಸಿನವರ ಪೌತ್ರರಾದ ಲಕ್ಷ್ಮೀ ಕಾಂತೈಯ್ಯರಸಿನವರ ಪುತ್ರರಾದ ಕಾಂತ ರಾಜೈಯ್ಯ ಅರಸಿನವರು ಸ್ವಹಸ್ತಾಕ್ಷರದಿಂದ ಬರೆದ ಪೂರ್ಣವಾದ ಸಾರ ಸಂಗ್ರಹ. (ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ. IV. ನಂ. ೧೭೫೨)

೪. ಬೀಳಗಿ ಅರಸರಲ್ಲಿ ಒಬ್ಬನಾದ ಇಮ್ಮಡಿ ಸೋಮೇಶೇಖರ ನಾಯಕನು (೧೭೭೯) ಜೈಮಿನಿಭಾರತದ ಪ್ರತಿಯನ್ನು ಪ್ರತಿಮಾಡಿರುವ ಬಗೆಗೆ 'ಭೂಮಿಪತಿ ಬೀಗಿ' ಇಮ್ಮಡಿ ಸೋಮಶೇಖರಸನಾಮಕಂ ಪುತ್ರ ಪೌತ್ರಾದಿ ವೃದ್ಧ್ಯರ್ಥ . . . .ತಾಳಗುಪ್ಪೆಯ ಸೀಮೆ ಹಿರೇಮನೆಯ ಗ್ರಾಮದೊಳಿರುತ ಶಕವರುಷ ೧೭೦೧ ನೆಯ ವಿಳಂಬಿ ಸಂವತ್ಸರದ ಕಾರ್ತೀಕ ಬಳಿಯು ಗುರುವಾರ ಬರೆದು ಸಂಪೂರ್ಣವಾಯಿತು ಎಂಬ ಉಲ್ಲೇಖದಿಂದ ತಿಳಿದು ಬರುತ್ತದೆ.

೫. ಕಳಲೆ ಕೆಂಪರಾಜಯ್ಯನವರ ಸ್ವಹಸ್ತಾಕ್ಷರ : ಶಾಲಿವಾಹನ ಶಕಾಬ್ಧ ೧೭೭೩ ನೆಯ ವರುಷ ಸಲುವ ವರ್ತಮಾನವಾದ ವಿರೋಧಿ ಕೃತು ಸಂವತ್ಸರದ ಕಾರ್ತೀಕ ಶುದ್ಧ ೧೨ಯು ಚಂದ್ರವಾರ ೩೧ . . . ವೇಣುಪುರಾಧೀಸರಾದ ರಾಜೈಯನವರ ಪ್ರಪೌತ್ರರಾದ ಕೆಂಜರಾಜೈಯರಸಿನವರ ಸ್ವಹಸ್ತಾಕ್ಷರದ ಲಿಖಿತದ ಪುಸ್ತಕ (ಪಾರಮಾರ್ಥ ಪ್ರಕಾಶಿಕೆ) (ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ.11. ನಂ. ೮೬೬)

೬. ವಿಶ್ವನಾಥನ ಸ್ವಹಸ್ತಾಕ್ಷರ : ಯಿಂತೀ ಶಾರದಾ ಗದ್ಯವನು ಸಿದ್ಧಾರ್ಥಿ ಸಂ. ಶ್ರಾವಣ ಶು.೧. ಬುಲುವಾರಣಾಸ ನಂಜೇ ಅರಸರ ಮಗ ವಿಶ್ವನಾಥ ಬರೆದನು. (ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ. VIII. ನಂ. ೩೭೯).

ಒಟ್ಟಾರೆಯಾಗಿ ನಾಡಿನ ಚರಿತ್ರೆಯಲ್ಲಿ ಪ್ರಧಾನ ಪಾತ್ರ ವಹಿಸಿರುವ ಅರಸರುಗಳೇ ರಾಜಕೀಯ ಪರಿಳಿತಗಳ ನಡುವೆಯೂ ನಾಡಿನ ಸಾಹಿತ್ಯ ರಚನೆಗೆ ಪ್ರೇರಕರಾಗಿರುವುದರ ಜೊತೆಗೆ ಕೆಲವೆಡೆ ಸ್ವತಃ ತಾವೇ ಉಭಯ ಭಾಷೆಗಳಲ್ಲಿ ವೈವಿಧ್ಯಮಯ ಸಾಹಿತ್ಯ ಕೃತಿಗಳ ಕರ್ತೃಗಳಾಗಿರುವುದು ನಾಡಿನ ಅರಸುಮನೆತನಗಳ ಚರಿತ್ರೆಯಲ್ಲಿ ಗಮನಿಸತಕ್ಕ ಸಂಗತಿಯಾಗಿದೆ.

# ಹಳಗನ್ನಡ ಮತ್ತು ನಡುಗನ್ನಡ ಗದ್ಯ

ಪ್ರೊ. ಜಿ. ಅಬ್ದುಲ್ ಬಷೀರ್

ಕನ್ನಡ ಸಾಹಿತ್ಯಕ್ಕೆ ಸುಮಾರು ಒಂದು ಸಾವಿರದ ಐದುನೂರು ವರ್ಷಗಳ ಇತಿಹಾಸ ವಿದೆ. ವಿಪುಲವಾದ ವೈವಿಧ್ಯಮಯವಾದ ಕನ್ನಡ ಸಾಹಿತ್ಯದಲ್ಲಿ ಗದ್ಯ ಕೃತಿಗಳಿಗಿಂತ ಪದ್ಯ ಕೃತಿಗಳೇ ಹೆಚ್ಚು ರಚನೆಯಾಗಿವೆ. 'ಪದ್ಯಂ ವಧ್ಯಂ, ಗದ್ಯಂ ಹೃದ್ಯಂ' ಎಂದು ಹತ್ತೊಂಬತ್ತನೆಯ ಶತಮಾನದ ಮುದ್ದಣ ಹೇಳಿರುವುದು ಗಮನಿಸಬೇಕಾದ ವಿಚಾರವಾಗಿದೆ. ಕವಿಗಳು ಹಳಗನ್ನಡ -ನಡುಗನ್ನಡ ಕಾಲಗಳಲ್ಲಿ ಚಂಪೂ, ಕಂದಪದ್ಯ, ಷಟ್ಪದಿ, ತ್ರಿಪದಿ ಸಾಂಗತ್ಯ, ರಗಳೆ ಮುಂತಾದ ಛಂದೋಬಂಧಗಳಲ್ಲಿ ಕೃತಿಗಳನ್ನು ರಚಿಸಿದರೇ ಹೊರತು, ಪೂರ್ಣವಾಗಿ, ಗದ್ಯವನ್ನೇ ಕೃತಿಗಳ ಮಾಧ್ಯಮವನ್ನಾಗಿ ಬಳಸಿಕೊಂಡದ್ದು ತೀರಾ ಕಡಿಮೆ ಎಂಬುದು, ಸಾಹಿತ್ಯ ಪ್ರಿಯರಿಗೆ ವೇದ್ಯವಾಗಿರುವ ಸಂಗತಿಯೇ ಆಗಿದೆ. ಆದರೆ ಗದ್ಯರೂಪಗಳು ಮಾತ್ರ, ಅನೇಕ ರೀತಿಗಳಲ್ಲಿ ಬಳಕೆಯಾಗಿವೆ. ಗದ್ಯ ಶಾಸನಗಳಲ್ಲಿ, ಶಾಸ್ತ್ರಗ್ರಂಥಗಳಲ್ಲಿ, ಗದ್ಯಕಥೆಗಳಲ್ಲಿ, ಚಂಪೂಕೃತಿಗಳಲ್ಲಿ ಅನೇಕ ರೂಪಗಳಲ್ಲಿ ಬೆಳೆದು ಬಂದಿದೆ. ಕನ್ನಡ ವಚನರೂಪದೊಡನೆ ಸೇರಿಕೊಂಡು ಪಡೆದ ವೈವಿಧ್ಯ ಹಾಗೂ ಪರಿಪಕ್ವತೆ ಶ್ಲಾಘನೀಯವಾದದ್ದು. ಪದ್ಯಗಳಂತೆ ಹುಟ್ಟಿನಿಂದಲೇ ಸಂಸ್ಕೃತಕ್ಕೆ ಹೊಂದಿಕೊಂಡು ಬಂದ ಕಾರಣದಿಂದ ಗದ್ಯ ಅಚ್ಚಕನ್ನಡತನ ಮೆರೆದದ್ದು ಕಡಿಮೆ ಎಂದೇ ಹೇಳಬೇಕು. ಆದರೂ ಹತ್ತನೆಯ ಶತಮಾನದ ಪಂಪ, ಹನ್ನೆರಡನೆಯ ಶತಮಾನದ ಹರಿಹರ ನಯಸೇನರಂಥವರ ಕೃತಿಗಳಲ್ಲಿ ದೇಸೀ ಸೊಬಗಿನ ಗದ್ಯವನ್ನು ನೋಡುತ್ತೇವೆ.

ಹಳಗನ್ನಡ – ನಡುಗನ್ನಡ ಕಾಲಗಳಲ್ಲಿ ಗದ್ಯ ಕೃತಿಗಳು ಹೆಚ್ಚು ರಚನೆಯಾಗದಿರುವುದಕ್ಕೆ ಅನೇಕ ಕಾರಣಗಳಿರಬಹುದು. ಮುಖ್ಯವಾಗಿ, ಆ ಕಾಲದಲ್ಲಿ ಗದ್ಯ ಕೃತಿಗಳಿಗೆ ರಾಜಾಸ್ಥಾನದಲ್ಲಾಗಲೀ, ಪಂಡಿತಮಂಡಲಿಯಲ್ಲಾಗಲೀ, ಜನ ಸಾಮಾನ್ಯರಲ್ಲಾಗಲೀ ಅಷ್ಟಾಗಿ ಘನತೆ-ಗೌರವಗಳು ದೊರಕುತ್ತಿರಲಿಲ್ಲ ಎಂದು ನಾವು ಊಹಿಸಬಹುದಾಗಿದೆ. ಪದ್ಯ ಮಾಧ್ಯಮದಲ್ಲಿ ಕೃತಿರಚನೆ ಮಾಡಿದರೆ ನೆನಪಿಟ್ಟುಕೊಳ್ಳುವುದು ಸುಲಭ; ಬರೆವಣಿಗೆಯ ಸಾಮಗ್ರಿಗಳ ಅನುಕೂಲ ಹಾಗೂ ಮುದ್ರಣ ಸೌಕರ್ಯ ಇಲ್ಲದಿದ್ದ ಆ ಕಾಲದಲ್ಲಿ ಪದ್ಯ ಕೃತಿಗಳೇ ಹೆಚ್ಚು ರಚನೆಯಾಗುತ್ತಿದ್ದುದು ಸಹಜ. ಗದ್ಯದಲ್ಲಿ ಗ್ರಂಥರಚನೆ ಮಾಡಿದರೆ ಮಹಾಕವಿ ಪಟ್ಟ ಸಿಗದಿರಬಹುದು ಎಂಬ ಶಂಕೆಯೂ ಕಾರಣವಿರಬಹುದು. ನಾಟಕ ರಚನೆಗೂ ಈ ಮಾತುಗಳು ಅನ್ವಯಿಸುತ್ತವೆ. ಆದ್ದರಿಂದಲೇ ವ್ಯಾಕರಣ, ಅಲಂಕಾರ, ನಿಘಂಟು, ಛಂದಸ್ಸು ಮುಂತಾದ ಶಾಸ್ತ್ರ ಗ್ರಂಥಗಳೂ ಛಂದೋಬದ್ಧವಾದ ಪದ್ಯದಲ್ಲಿಯೇ ರಚನೆಯಾಗುತ್ತಿದ್ದವು.

ಕ್ರಿ. ಶ. ೮೫೦ ರ ಶ್ರೀ ವಿಜಯ ತನ್ನ ಅಲಂಕಾರಶಾಸ್ತ್ರ ಗ್ರಂಥವಾದ 'ಕವಿರಾಜಮಾರ್ಗ'ದಲ್ಲಿ ಗದ್ಯದ ಲಕ್ಷಣವನ್ನು ಹೀಗೆ ಹೇಳಿದ್ದಾನೆ : "ಕಾವ್ಯ ಪುರುಷನ ಶರೀರವು 'ಗದ್ಯ', 'ಪದ್ಯ' ಎಂದು ಎರಡು ವಿಧ (೧-೨೪). ಪದಪಾದ ನಿಯಮ ವಿಲ್ಲದಿದ್ದರೂ, ಪದ್ಯ ಕಾವ್ಯದಂತೆಯೇ ಗದ್ಯಕಾವ್ಯವೂ ಅಲಂಕಾರಗಳಿಂದ ಕೂಡಿದ್ದು

ಕ್ರಿಯಾಕಾರಕದಲ್ಲಿ ಸರಿಯಾಗಿ ಸೇರ್ಪಡೆಯಾಗಿ ಅರ್ಥವ್ಯಕ್ತಿಯನ್ನು ಕೊಡುವುದು ಗದ್ಯ" (೧-೨೫). ಗದ್ಯದ ಗುಣಗಳು ಸ್ಪಷ್ಟತೆ, ಖಚಿತತೆ, ನಿರಾಡಂಬರತೆ, ಸಹಜವಾದ ಓಟ, ಕಿವಿಗೆ ಹಿತವಾದ ಶಬ್ದದ ಹೆಣಿಗೆ ಮತ್ತು ಲಯ. ಲಭಿಸಿರುವ ಹಳಗನ್ನಡ-ನಡುಗನ್ನಡ ಗ್ರಂಥಗಳಲ್ಲಿ 'ಮಾರ್ಗ-ದೇಸಿ'ಗಳ ಸಮನ್ವಯ ಇದೆ. ಹೊಸಗನ್ನಡ ಕಥನ ಶೈಲಿಯನ್ನು, ಅನೇಕ ಗ್ರಂಥಗಳಲ್ಲಿ ಕಾಣಬಹುದು. ಒಟ್ಟಾರೆ, ಪದ್ಯಕಾವ್ಯಕ್ಕಿರುವ ನಿರ್ಬಂಧಗಳು, ಗದ್ಯಕಾವ್ಯಕ್ಕೆ ಇಲ್ಲ.

ಕವಿರಾಜಮಾರ್ಗಕಾರ "ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ" ಮುಂತಾದವರು ಗದ್ಯಕಾರರು ಎಂದು ಹೇಳಿದ್ದಾನೆ (೧-೨೯). ಇವರೆಲ್ಲರೂ ಪೂರ್ವದ ಹಳಗನ್ನಡ ಕಾಲದಲ್ಲಿ ಇದ್ದರೆಂದು ತೋರುತ್ತದೆ. ಆದರೆ ಇವರ ಗದ್ಯಗ್ರಂಥಗಳಾವುವೂ ನಮಗೆ ಸಿಕ್ಕಿಲ್ಲ.

ಪೂರ್ವದ ಹಳಗನ್ನಡ ಕಾಲದಲ್ಲಿ ಗದ್ಯ ವಿಶೇಷವಾಗಿ ಶಾಸನಗಳಲ್ಲಿ ಬಳಕೆಯಾಗಿದೆ; ಪ್ರಧಾನವಾಗಿ, ವರ್ಣನೆ ಇರುವ ಕಡೆ ಗದ್ಯ ಅನುಕೂಲಕರ ಮಾಧ್ಯಮವಾಗಿರುವುದನ್ನು ಗುರುತಿಸಬಹುದು. ಕ್ರಿ. ಶ. ಒಂಬತ್ತನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಅಂದರೆ, ಹಳಗನ್ನಡ–ನಡುಗನ್ನಡ ಕಾಲಗಳಲ್ಲಿ ಕೆಲವು ಸ್ವತಂತ್ರ ಗದ್ಯ ಕೃತಿಗಳು ಹಾಗೂ ಅನುವಾದ ಕೃತಿಗಳು ರಚನೆಯಾಗಿವೆ. ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳನ್ನು ಕನ್ನಡ ಗದ್ಯ ಸಾಹಿತ್ಯದ ಸುವರ್ಣಯುಗ ಎಂದು ಕರೆಯಬಹುದು.

ಹಳಗನ್ನಡ ಗದ್ಯ, ಸಂಸ್ಕೃತ ಭೂಯಿಷ್ಠವೂ, ಪಾಂಡಿತ್ಯ ಪೂರ್ಣವೂ ಆಗಿರುವುದನ್ನು ನೋಡಬಹುದು. ನಡುಗನ್ನಡ ಗದ್ಯದೇಸೀ ನಿಷ್ಠವೂ ಜನಸಮ್ಮುಖವೂ ಆಗಿರುವುದನ್ನು ಗುರುತಿಸಬಹುದು. ಕೆಲವು ಕಡೆ ಗದ್ಯದಲ್ಲಿ ಪದ್ಯ ರಚನೆಯಂತೆಯೇ ಶಬ್ದಗಳ ಜೋಡಣೆ, ಪ್ರಾಸಾನುಪ್ರಾಸ, ಅಲಂಕಾರಗಳ ಬಳಕೆ ಇರುವುದು ಗಮನಾರ್ಹ ವಿಚಾರವಾಗಿದೆ.

### ಶಾಸನ ಗದ್ಯ:

ಪೂರ್ಣ ಪ್ರಮಾಣದ ಗದ್ಯ ಗ್ರಂಥಗಳು ರಚನೆಯಾಗುವ ಮುನ್ನ, ಶಾಸನಗಳಲ್ಲಿ ಗದ್ಯ ಬಳಕೆಯಾಗಿದೆ. ಶಾಸನಗಳಲ್ಲಿ ಚಾರಿತ್ರಿಕ ಸಾಮಾಜಿಕ ಘಟನೆಗಳ ಅಪೂರ್ವ ಚಿತ್ರಣ ಇರುತ್ತದೆ. ಗ್ರಂಥಸ್ಥ ಭಾಷೆಯ ಅನುಸರಣೆ ಇದ್ದರೂ, ಪ್ರಚಲಿತ ದೇಸೀ ಶಬ್ದಗಳ ಬಳಕೆಯೂ ಇದೆ. ಪ್ರೌಢಭಾಷೆಗಿಂತ ಬೇರೆಯೇ ಆದ ಒಂದು ಮಾರ್ಗವನ್ನು ಅದು ತುಳಿಯಲು ಯತ್ನಿಸಿದಂತೆ ಇದೆ. ಅಲ್ಲಲ್ಲಿ ಅಶುದ್ಧ–ಗ್ರಾಮ್ಯರೂಪಗಳೂ ಕಂಡುಬರುತ್ತವೆ. ಕೆತ್ತನೆಕಾರರಿಂದ ಹಾಗೆ ಆಗಿರಬಹುದು; ಅಥವಾ ಶಾಸನದ ವಿಚಾರ ಜನರಿಗೆ ತಿಳಿಯಲಿ ಎಂಬುದಕ್ಕೆ ಇರಬಹುದು, ಗ್ರಾಂಥಿಕ ಭಾಷೆ ಮಾರ್ಗ ಕಾವ್ಯಗಳಲ್ಲಿ ಕಾಲದಿಂದ ಕಾಲಕ್ಕೆ ಆಡುನುಡಿಯಲ್ಲಿ ಆಗಬಹುದಾದ ಬದಲಾವಣೆಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳದೆ ಇದ್ದಾಗ, ಶಾಸನಗಳು ಅದನ್ನು ಕೆಲಮಟ್ಟಿಗೆ ಮೂಡಿಸಿರುತ್ತವೆ. ಹೀಗೆ ಶಾಸನ ಗದ್ಯ ಪ್ರಗತಿಪರವಾದ ಒಂದು ಗದ್ಯರೂಪವಾಗಿದೆ.(ರಂ.ಶ್ರೀ.ಮುಗಳಿ).

ಕನ್ನಡ ಭಾಷೆ ಮತ್ತು ಸಾಹಿತ್ಯದ ಅಸ್ತಿತ್ವದ ಬಗೆಗೆ ನಮಗೆ ಕನ್ನಡದಲ್ಲಿಯೇ ಲಭಿಸುವ ಮೊತ್ತಮೊದಲ ಬರೆಹ ಎಂದರೆ, ಕ್ರಿ. ಶ. ೪೫೦ರ ಹಲ್ಮಿಡಿ ಶಾಸನ. ಸಂಸ್ಕೃತ ಭೂಯಿಷ್ಠವಾದ ಈ ಶಾಸನದಲ್ಲಿ ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಪ್ರಯೋಗಗಳು ಇವೆ. ಇದರಲ್ಲಿ ಕನ್ನಡಿಗರ ಪರಾಕ್ರಮ ಮತ್ತು ದಾನಗುಣಗಳನ್ನು ಚಿತ್ರಿಸಲಾಗಿದೆ. "ಕೇಕಯ ಪಲ್ಲವರಂ ಕಾದೆಱ್ದು, ಪೆತ್ತಜಯನಾ ವಿಜಅರಸನ್ಗೆ ಬಾಳ್ಗಳ್ಚು ಪಲ್ಮಿಡಿಉಂ ಮೂಱುವಳ್ಳಿಉಂ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು.

ಕ್ರಿ. ಶ. ೮ನೆಯ ಶತಮಾನದ 'ವೀರಗಲ್ಲು', ೧೧೩೮ರ ಬೇಲೂರಿನ ೨೦೨ನೆಯ ಶಾಸನ' ಮತ್ತು ೧೩೬೮ ರ ಶ್ರವಣಬೆಳಗೊಳದ ೩೪೪ನೆಯ ಶಾಸನಗಳಲ್ಲಿ ಕ್ರಮವಾಗಿ 'ದಾನ', 'ಲೆಂಕರಾಯನ ಪರಾಕ್ರಮ' ಮತ್ತು 'ಬುಕ್ಕರಾಯನ ಸರ್ವಧರ್ಮ ಸಮನ್ವಯದೃಷ್ಟಿ'ಗಳು ಚಿತ್ರಣಗೊಂಡಿವೆ. ಮೂರನೆಯ ಶಾಸನ ನಡುಗನ್ನಡದಲ್ಲಿದೆ.

**ಶಾಸ್ತ್ರಗದ್ಯ:**

೧೦ನೆಯ ಶತಮಾನದ ಪಂಪನ ಆದಿಪುರಾಣದ ತಾತ್ವಿಕ ಭಾಗದಲ್ಲಿ ಶಾಸ್ತ್ರಗದ್ಯ ಮೊದಲು ಕಾಣಿಸುತ್ತದೆ. ಕವಿರಾಜಮಾರ್ಗದಲ್ಲಿ ಉಲ್ಲೇಖವಾಗಿರುವ ದುರ್ವಿನೀತ ಮುಂತಾದವರು, ಜೈನಧರ್ಮದ ಪ್ರಕಾರಕ್ಕಾಗಿ ಈ ಬಗೆಯ ಗದ್ಯವನ್ನು ಬಳಸಿಕೊಂಡಿರಬೇಕು. ಅವು ಸಂಸ್ಕೃತ ಭೂಯಿಷ್ಠ ಹಾಗೂ ತರ್ಕನಿಷ್ಠ ವಾಗಿದ್ದಿರಬಹುದು ಎಂಬುದಕ್ಕೆ ಪಂಪನ ಆದಿಪುರಾಣವೇ ಉದಾಹರಣೆಯಾಗಿದೆ. ಬಹುತೇಕ ಜೈನ ಚಂಪೂಗ್ರಂಥಗಳಲ್ಲಿ ಈ ಶಾಸ್ತ್ರಗದ್ಯ ಬಳಕೆಯಾಗಿದೆ. ಕೇಶಿರಾಜನ ಶಬ್ದಮಣಿ ದರ್ಪಣದ 'ವೃತ್ತಿ' ಭಾಗ ಹಳಗನ್ನಡ ಗದ್ಯದ ಖಚಿತತೆಗೆ, ಸ್ಪಷ್ಟತೆಗೆ ಒಳ್ಳೆಯ ನಿದರ್ಶನವಾಗಿದೆ. "ವ್ಯಾಕರಣದಿಂ ಪದಸಿದ್ಧಿಯಕ್ಕುಂ, ಪದಸಿದ್ಧಿಯಿಂದರ್ಥಜ್ಞಾನಮಕ್ಕುಂ, ಅರ್ಥ ಜ್ಞಾನದಿಂ ತತ್ತ್ವವಿಚಾರಮಕ್ಕುಂ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು. ಈತನ ಅಲಭ್ಯ ಕೃತಿ ಪ್ರಬೋಧಚಂದ್ರಂ' ಗದ್ಯದಲ್ಲಿದ್ದು ತಾತ್ವಿಕ ವಿಚಾರಗಳನ್ನೊಳಗೊಂಡಿದ್ದಿರಬೇಕೆಂದು ಊಹಿಸಬಹುದಾಗಿದೆ.

**ಗದ್ಯಕಥೆ:**

ಶಾಸ್ತ್ರ ಗದ್ಯಕ್ಕಿಂತ ಸರಳವೂ ದೇಸೀನಿಷ್ಠವೂ ಆದದ್ದು, 'ಗದ್ಯ ಕಥೆ' ಕವಿ-ರಾಜಮಾರ್ಗದಲ್ಲಿ ಇದರ ಉಲ್ಲೇಖ ಇದೆ. 'ವಡ್ಡಾರಾಧನೆ' ಗದ್ಯ ಕಥೆಗೆ ಒಂದು ಒಳ್ಳೆಯ ನಿದರ್ಶನವಾಗಿದೆ. ದುರ್ಗಸಿಂಹನ 'ಪಂಚತಂತ್ರ' ನಯಸೇನನ 'ಧರ್ಮಾಮೃತ' ಹರಿಹರನ 'ಬಸವರಾಜದೇವರ ರಗಳೆ' 'ನಂಬಿಯಣ್ಣನ ರಗಳೆ' ಕೃತಿಗಳ ಸಹಾಯದಿಂದ ಕಥಾ ಗದ್ಯದ ಪ್ರಾಚೀನ ಸ್ವರೂಪವನ್ನು ಅರಿಯಬಹುದು.

**ಚಂಪೂಗದ್ಯ:**

೧೦-೧೨ನೆಯ ಶತಮಾನದ ವಿಕ್ರಮಾರ್ಜುನವಿಜಯ ಗದಾಯುದ್ಧ, ಶಾಂತಿಪುರಾಣ, ಅನಂತ ನಾಥ ಪುರಾಣ ಮುಂತಾದ ಚಂಪೂ ಕೃತಿಗಳಲ್ಲಿ ಬಳಕೆಯಾಗಿರುವ ಗದ್ಯವನ್ನು, ಚಂಪೂಗದ್ಯ ಎಂದು ಹೆಸರಿಸಬಹುದು. ಈ ಗದ್ಯದಲ್ಲಿ ಕಥನ, ಸಂಭಾಷಣೆ,

ಶಾಸ್ತ್ರ ವಿಚಾರಗಳು ಸೇರಿರುತ್ತವೆ. ೧೨ನೆಯ ಶತಮಾನದ ಹರಿಹರನ 'ಬಸವರಾಜ ದೇವರ ರಗಳೆ' ಮತ್ತು ನಂಬಿಯಣ್ಣನ ರಗಳೆ' ಗಳೂ ಒಂದು ಬಗೆಯ ಚಂಪೂ ಗ್ರಂಥಗಳೇ! ರಗಳೆ ಛಂದಸ್ಸಿನ ಏಕತಾನತೆಯನ್ನು ತಪ್ಪಿಸಲು ಮತ್ತು ವೈವಿಧ್ಯತೆಯನ್ನುಂಟು ಮಾಡಲು ಆತ ಒಂದು ಸ್ಥಲ ಪದ್ಯ, ಒಂದು ಸ್ಥಲ ಗದ್ಯ ತಂದಿದ್ದಾನೆ. ಇದು ಗದ್ಯ ಬಳಕೆಯ ಒಂದು ಹೊಸಮುಖವಾಗಿದೆ. ಈ ಗದ್ಯ ಚಂಪೂ ಗದ್ಯಕ್ಕೆ ಹತ್ತಿರವಾದರೂ, ಅದರ ವಿಷಯ, ರಸ, ಶೈಲಿಗಳಲ್ಲಿ ಹರಿಹರನ ವ್ಯಕ್ತಿ ವೈಶಿಷ್ಟ್ಯ ಕಂಡು ಬರುತ್ತದೆ. ದೈವ, ಭಕ್ತಿ, ಭಕ್ತನ ವರ್ಣನೆಗೆ ತಕ್ಕ ಆವೇಶ ಭರಿತ ಭಾಷೆಯನ್ನು ಕಾವ್ಯದಂತೆ ಬಳಸಿರುವುದು ಒಂದು ವಿಶೇಷವಾಗಿದೆ* ಪಂಚತಂತ್ರದ ಚಂಪೂಗದ್ಯ ನಿರಾಭರಣವಾದದ್ದು. ಅಲ್ಲಿ ನೇರ ನಿರೂಪಣೆ, ಅಚ್ಚಗನ್ನಡದ ಸೊಗಸಿದೆ. ನಯಸೇನನ ಧರ್ಮಾಮೃತದಲ್ಲಿ ತನ್ನ ತೀವ್ರವಾದ ಲೋಕಾನುಭವ, ಸಮಕಾಲೀನ ಭಾಷಾ ಪ್ರಜ್ಞೆ, ಅದರ ಬಳಕೆಯಲ್ಲಿ ತೋರುವ ಉತ್ಸಾಹ ಮೆಚ್ಚುವಂತಹದು.

ಈಗ ಪೂರ್ಣಪ್ರಮಾಣದ ಗದ್ಯಗ್ರಂಥಗಳ ವಿಚಾರಕ್ಕೆ ಬರಬಹುದು. ಕ್ರಿ. ಶ. ಸುಮಾರು ೯ನೆಯ ಶತಮಾನದಲ್ಲಿ ರಚಿತವಾಗಿರಬಹುದಾದ ಭ್ರಾಜಿಷ್ಣುವಿನ 'ವಡ್ಡಾರಾಧನೆ' ನಮಗೆ ದೊರೆತ ಮೊತ್ತಮೊದಲ, ಸೊಗಸಾದ ಗದ್ಯ ಗ್ರಂಥ. ಇದರಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ೧೯ ಕಥೆಗಳಿವೆ. ಎಲ್ಲಾ ಕಥೆಗಳೂ ನೀತಿ ಪರವಾಗಿವೆ, ವೈರಾಗ್ಯ ಬೋಧಕವಾಗಿವೆ. ಜ್ಞಾನ, ದರ್ಶನ, ಚಾರಿತ್ರ್ಯ, ತಪಸ್ಸುಗಳ ಆದರ್ಶ ಆಚರಣೆ, ಹಿರಿಯ ಜೈನಯತಿಗಳ ಧರ್ಮ. ಇದನ್ನು ಬೋಧಿಸುವ ಗ್ರಂಥ 'ಆರಾಧನೆ'. ಇಲ್ಲಿನ ಕಥನ ಕಲೆ ಮತ್ತು ದೇಸೀ ನಿಷ್ಠೆ ಅಪೂರ್ವವಾದವು. ಇಲ್ಲಿ ಕನ್ನಡ ಸಂಸ್ಕೃತಗಳ ಸರಿಬೆರಕೆಯಿದೆ. ಗಾದೆಮಾತುಗಳು, ಒಳ್ನುಡಿಗಳು ಹೇರಳವಾಗಿವೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಚಿರಂತನವಾಗಿ ನೆನೆಯಬಹುದಾದ, ವೈಶಿಷ್ಟ್ಯ ಪೂರ್ಣವಾದ ಕೃತಿಯಾಗಿದೆ. ಧರ್ಮ ಪ್ರಚಾರ ಮಾಡಲು, ಪದ್ಯ ರಚನೆಗಿಂತ ಗದ್ಯ ರಚನೆ ಹೆಚ್ಚು ಅನುಕೂಲಕರ ಎಂದ ಕವಿ ಭಾವಿಸಿದಂತೆ ಇದೆ: "ನಿಸ್ಸಾರಮಪ್ಪ ಭೋಗದೊಳ್ ಸಿಲ್ಕಿ, ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್, ಕಾಲಮಂ ಬಱಿದೆ ಕಳೆದೆಂ" ಎಂಬ ಸಾಲನ್ನು ಗದ್ಯದ ಸೊಗಸಿಗಾಗಿ ನೋಡಬಹುದು.

'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ಇಲ್ಲವೆ 'ಚಾವುಂಡರಾಯ ಪುರಾಣ'ದ ಕರ್ತೃ ಚಾವುಂಡರಾಯ. ಈತನ ಕಾಲ ೯೭೮. ಜೈನಧರ್ಮ ನಿರೂಪಣೆ ಇದರ ಮುಖ್ಯ ಗುರಿ. ನಡುನಡುವೆ ತೀರ ಕಡಿಮೆ ಪದ್ಯಗಳನ್ನು ಒಳಗೊಂಡ ಗದ್ಯಭೂಯಿಷ್ಠ ಕೃತಿ ಇದು. ಪದ್ಯ ರೂಪದಲ್ಲಿದ್ದ ಸಂಸ್ಕೃತ ಕೃತಿ, ಗದ್ಯ ರೂಪ ತಾಳಿದೆ. ಕಥಾ ಗದ್ಯದ ಸಹಜ ನಡೆ, ಬಳಕೆ ಮಾತಿನ ಸೊಗಸು, ಶಾಸ್ತ್ರಗದ್ಯದ ಅಚ್ಚುಕಟ್ಟು, ಜನ ಸಾಮಾನ್ಯರನ್ನೂ ಆಕರ್ಷಿಸುತ್ತದೆ. ಜೈನ ಧರ್ಮ, ತತ್ತ್ವ, ಸಂಪ್ರದಾಯಗಳ ಬಗ್ಗೆ ಆಸಕ್ತಿ, ಶ್ರದ್ಧೆಗಳನ್ನು ಸಾಮಾನ್ಯ ಜನರಲ್ಲಿ ಹುಟ್ಟಿಸುವ ಅಪೇಕ್ಷೆ, ಗಾಂಭೀರ್ಯ–ಸರಳತೆಗಳ ಮಿಶ್ರಣ, 'ವಡ್ಡಾರಾಧನೆ' ಮತ್ತು

* ಅಲ್ಲಿಂ ತಳರ್ದು ಮೋನದಿಂ ಸಾಧುಬ್ರಾಹ್ಮಣನಂತೆ ಚಪ್ಪರದಿಂಪೊಱಮಟ್ಟು ಸೌಂದರ ಪೆರುಮಾಳೆಯಿರ್ದ ವನಕ್ಕೆ ಬಂದು ಅಲ್ಲಿ ಮುಂದೆ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು.

'ಚಾವುಂಡರಾಯ ಪುರಾಣಗಳಲ್ಲಿ ಸಮಾನವಾಗಿ ಬಂದಿವೆ. ಮಾರ್ಗಕಾವ್ಯದ ಪ್ರೌಢಕೃತಿಗಳು ಸೃಷ್ಟಿಯಾಗುತ್ತಿದ್ದ ಕಾಲದಲ್ಲಿ ಈ ಕೃತಿಗಳು ರಚಿತವಾದದ್ದು, ವಿಶೇಷವಾದ ಸಂಗತಿಯಾಗಿದೆ.*

೧೩೦೦ರಲ್ಲಿ ಹಸ್ತಿಮಲ್ಲ ಕವಿ 'ಪೂರ್ವಪುರಾಣವನ್ನು ರಚಿಸಿದ್ದಾನೆ. ಚಾವುಂಡರಾಯ ಪುರಾಣದ ಆದಿಪುರಾಣ ಇಲ್ಲಿ 'ಪೂರ್ವಪುರಾಣ'ವಾಗಿ ಪರಿಣಮಿಸಿದೆ. ಅಚ್ಚಗನ್ನಡ ಶಬ್ದ ಬಳಕೆ ಇಲ್ಲಿನ ಸೊಗಸು. ಹಳಗನ್ನಡ ಹೊಸಗನ್ನಡ ಮಿಶ್ರಣ ಭಾಷೆ ಇಲ್ಲಿದೆ.

ನಡುಗನ್ನಡ ಕಾಲದಲ್ಲಿ ಅಂದರೆ ೧೩ ರಿಂದ ೧೮ನೆಯ ಶತಮಾನಗಳಲ್ಲಿ ಮತಧರ್ಮಶಾಸ್ತ್ರಗಳನ್ನು ನಿರೂಪಿಸುವ ಗದ್ಯ ಗ್ರಂಥಗಳು, ತೀರಾ ಕಡಿಮೆ ಲಭಿಸುತ್ತವೆ. ೧೫೦೦ರ ನಿಜುಗಣ ಶಿವಯೋಗಿಗಳ 'ವಿವೇಕ ಚಿಂತಾಮಣಿ' ಒಂದು ಜ್ಞಾನಕೋಶ. ಸಾಹಿತ್ಯದ ಲಕ್ಷಣವುಳ್ಳ ಕೆಲವು ಕೃತಿಗಳು, ೧೭ನೆಯ ಶತಮಾನದಲ್ಲಿ ರಚಿತವಾದವು. ಚಿಕ್ಕದೇವರಾಜ ಬಿನ್ನಪದಲ್ಲಿ ಶ್ರೀ ವೈಷ್ಣವ ಮತದ ತತ್ತ್ವಗಳನ್ನು, ಒಂದೊಂದು ಬಿನ್ನಪದಲ್ಲಿ ನಿರೂಪಸಿದೆ. ಶಾಸ್ತ್ರವನ್ನು ಸಾಹಿತ್ಯ ರೂಪಕ್ಕೆ ಇಳಿಸಿದ, ಭಕ್ತಿ ಜ್ಞಾನ ಮಿಶ್ರಣವುಳ್ಳ ಗ್ರಂಥ ಇದು. ಶೈಲಿಯ ಸರಳತೆ, ಇಲ್ಲಿನ ಸೊಬಗು.

ತಿರುಮಲಾರ್ಯನ 'ಚಿಕ್ಕದೇವರಾಯ ವಂಶಾವಳಿ', ಕಾವ್ಯ ಪ್ರೌಢಿಮೆಯ ಸುಂದರ ಗದ್ಯ ಕೃತಿಯಾಗಿದೆ. ಚರಿತ್ರೆ, ಮತೀಯತೆ, ಭಕ್ತಿಗಳ ವಿಶಿಷ್ಟಪಾಕ ಈ ಕೃತಿಯಲ್ಲಿದೆ. ಸಂಸ್ಕೃತ ಸಂಸರ್ಗವನ್ನು ತ್ಯಜಿಸದೆ, ಅಚ್ಚಕನ್ನಡದ ಶೈಲಿಯನ್ನು ಈ ಕವಿ ಮೈಗೂಡಿಸಿಕೊಂಡಿದ್ದಾನೆ.

೧೮ನೆಯ ಶತಮಾನದ ದೇವಚಂದ್ರನ 'ರಾಜಾವಳೀ ಕಥೆ' ಚಾರಿತ್ರಿಕ ಕಥನ ಸಾಮಗ್ರಿಯನ್ನೊಳಗೊಂಡ, ಮೌಲಿಕ ಗದ್ಯ ಕೃತಿಯಾಗಿದೆ. ಮೈಸೂರು ರಾಜರ ಪರಂಪರೆಯನ್ನೂ ಸಂಗ್ರಹಿಸಿರುವುದಲ್ಲದೆ, ಜೈನಧರ್ಮಕ್ಕೆ ಸಂಬಂಧಿಸಿದ ಕೆಲವು ವಿವರಗಳೂ, ರಾಜರ ಚರಿತ್ರೆ ಹಾಗೂ ಕೆಲವು ಕವಿಗಳ ವಿಷಯಗಳೂ ಇದರಲ್ಲಿರುವುದು ಸ್ವಾರಸ್ಯವಾದ ಸಂಗತಿಯಾಗಿದೆ.

೧೮೨೩ರಲ್ಲಿ ರಚಿತವಾದ ಕೆಂಪುನಾರಾಯಣನ 'ಮುದ್ರಾಮಂಜೂಷ' ಹಳಗನ್ನಡ–ನಡುಗನ್ನಡ–ಹೊಸಗನ್ನಡಗಳ ಮಿಶ್ರಣವನ್ನು ಒಳಗೊಂಡಿರುವಂಥ ಗದ್ಯ ಕೃತಿಯಾಗಿದೆ.

೧೮೬೯–೧೯೦೧ ರ ನಡುವಿನ ಅವಧಿಯಲ್ಲಿ ಬದುಕಿದ್ದ ಮುದ್ದಣ 'ಶ್ರೀರಾಮಾಶ್ವಮೇಧ' ಮತ್ತು 'ಅದ್ಭುತ ರಾಮಾಯಣ' ಎಂಬ ಎರಡು ಹಳಗನ್ನಡ ಗದ್ಯ ಗ್ರಂಥಗಳನ್ನು ಬರೆದಿದ್ದಾನೆ. ಇದೊಂದು ವಿಚಿತ್ರ ಎನಿಸಿದರೂ, ವೈಶಿಷ್ಟ್ಯ ಪೂರ್ಣ ಗದ್ಯದ ಬಳಕೆಯಿಂದಾಗಿ, ಈ ಕೃತಿಗಳು ಜನಮನ್ನಣೆ ಪಡೆದಿವೆ. ಹೇರಳವಾದ ತದ್ಭವ ಶಬ್ದಗಳ ಬಳಕೆ ಇಲ್ಲಿದೆ. ಆಧುನಿಕ ಸಣ್ಣ ಕತೆಗಳಂತೆ, ಅದ್ಭುತರಾಮಾಯಣದ ಶಿಲ್ಪವಿದೆ ಎಂದರೆ ತಪ್ಪಾಗಲಾರದು.

* "ಅನ್ನೆಗಂ ಶೋಕಮಂ ಪತ್ತುವಿಟ್ಟು ಸೈರಿಸುವುದೆಂದು ಸೀತೆಯಲ್ಲಿಗೆ ದೂತರನಟ್ಟುವುದೆಂಬ ಲೇಖವಾರ್ತೆಯಂ ಕೇಳ್ದು ರಾಮಸ್ವಾಮಿ ಕೋಪರಸಾಕ್ರಾಂತನಾಗ" ಎಂಬ ಸಾಲನ್ನು ಉದಾಹರಣೆಯಾಗಿ ನೋಡಬಹುದು.

ಎಲ್ಲಾ ಗದ್ಯ ಗ್ರಂಥಗಳೂ ಮೂಲವನ್ನು ಅನುಸರಿಸಿದ್ದರೂ ಅವು ಪಡೆದಿರುವ ಕಲಾತ್ಮಕತೆ ಹಾಗೂ ಸಂಸ್ಕೃತವನ್ನು ಬಿಡದೆ, ಅಚ್ಚಗನ್ನಡದತ್ತ ಒಲಿದಿರುವ ತನ್ನತನವನ್ನು ಒಳಗೊಂಡ ಗದ್ಯ ಶೈಲಿಯನ್ನು ಪಡೆದಿವೆ.

## ಗ್ರಂಥ ಋಣ


೧. ಕನ್ನಡ ಸಾಹಿತ್ಯ ಚರಿತ್ರೆ – ಡಾ. ರಂ. ಶ್ರೀ ಮುಗಳಿ

೨. ಕನ್ನಡ ಸಾಹಿತ್ಯದ ಪ್ರಾಚೀನ ರೂಪಗಳು – ಡಾ. ರಂ. ಶ್ರೀ ಮುಗಳಿ

೩. ಹಳಗನ್ನಡ ಗದ್ಯ ವಿಕಾಸ–ಪ್ರೊ. ಎನ್. ಬಸವಾರಾಧ್ಯ

೪. ಕನ್ನಡದ ಪ್ರಾಚೀನ ಸಾಹಿತ್ಯ ಲಕ್ಷಣಗಳು – ಮರುನೋಟ

– ಪ್ರೊ. ಟಿ. ಕೇಶವಭಟ್ಟ

# ಕನ್ನಡ ಸಾಹಿತ್ಯದ ಮೇಲೆ ದಾಸ ಸಾಹಿತ್ಯದ ಪ್ರಭಾವ

ಪ್ರೊ. ವಸಂತ ಕುಷ್ಟಗಿ

ಕನ್ನಡ ಭಾಷೆ-ಸಾಹಿತ್ಯಗಳಿಗೆ ಬಹು ಪ್ರಾಚೀನ ಪರಂಪರೆಯಿದೆ. ಭಾರತೀಯ ಭಾಷೆಗಳಲ್ಲಿ ಸಂಸ್ಕೃತ ಮತ್ತು ತಮಿಳುಗಳ ನಂತರ ಬಹುಶಃ ಕನ್ನಡದ ಸ್ಥಾನವೇ ಈ ದಿಸೆಯಲ್ಲಿ ಗಮನಾರ್ಹವಾದುದು. ಕಾಲದ ಹಳಮೆಯನ್ನು ಗುರುತಿಸಲು ಸಂಶೋಧನೆಗೆ ಸಾಕಷ್ಟು ಅವಕಾಶಗಳಿದ್ದರೂ, ಈಗಿರುವ ನಿರ್ಧಾರಗಳ ಮೇಲಿಂದ ಕನ್ನಡ ಸಾಹಿತ್ಯದ ಕಾಲ ವಿಸ್ತಾರವೂ ಆಶ್ಚರ್ಯಗೊಳಿಸುವಂತಹದೇ ಸೈ. ಇದನ್ನು ಗಮನಿಸಿದಾಗ ಸುಮಾರು ಎರಡು ಸಾವಿರ ವರ್ಷಗಳ ಜಾಡನ್ನಂತೂ ಸ್ಪಷ್ಟವಾಗಿ ಕಾಣುತ್ತೇವೆಂದ ಮೇಲೆ, ಕನ್ನಡ ಸಾಹಿತ್ಯವು ಅನೇಕ ವೈಲಕ್ಷಣ್ಯಗಳಿಂದ ಕೂಡಿದೆಯೆಂಬುದು ನಿರ್ವಿವಾದ. ಅವುಗಳೆಲ್ಲ ಸರ್ವೇಸಾಮಾನ್ಯವಾಗಿ ನಮಗೆ ಇಂದಿಗೂ ಸ್ಫೂರ್ತಿಯ ನೆಲೆಯಾಗಿವೆ.

ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತದ ಪ್ರಭಾವವು ಸಾಕಷ್ಟುಯಿದ್ದರೂ, ಅದು ತನ್ನ ಮೂಲ ದ್ರಾವಿಡ ಸೊತ್ತನ್ನು ಹೊಗರನ್ನು ಬಿಟ್ಟಿಲ್ಲ. ಅದನ್ನು ಉಳಿಸಿಕೊಂಡು ಬೆಳೆಸಿಕೊಂಡೇ ಬಂದಿದ್ದು ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಂಡು ನಿಂತಿದೆ. ಅಂತೆಯೇ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಇತಿಹಾಸದಲ್ಲಿ ಮತ ಪಂಥಗಳ ವೈವಿಧ್ಯ ಮತ್ತು ಅವುಗಳ ಅನ್ಯೋನ್ಯ ಸಂಪರ್ಕಗಳನ್ನು, ಆ ಸಂಪರ್ಕಗಳಲ್ಲಿ ಸಂಘರ್ಷಗಳಿಂದುಂಟಾದ ನವೀನ ಅನ್ಯೋನ್ಯತೆಗಳನ್ನು ನಿಚ್ಚಳವಾಗಿ ಕಾಣಬಹುದಾಗಿದೆ. "ವೈದಿಕ ಪರಂಪರೆಯ ಶೈವ, ವೈಷ್ಣವ ಭಕ್ತಿ ಮಾರ್ಗಗಳು, ಆ ಮೇಲೆ ತಲೆದೋರಿದ ಶಾಂಕರ, ರಾಮಾನುಜ, ಮಾಧ್ವಮತತ್ರಯಗಳು – ಇವಕ್ಕೆಲ್ಲ ಕನ್ನಡ ಸಾಹಿತ್ಯ ವಾಣಿಯಾಗಿದೆ. ಶಾಂಕರ ಮತದಲ್ಲಿ ವಿಷ್ಣುಭಕ್ತಿ ತೋರಿ ರೂಪಗೊಂಡ ಸ್ಮಾರ್ತ ಭಾಗವತ ಸಂಪ್ರದಾಯ, ರಾಮಾನುಜ ಮತದಲ್ಲಿ ವರ್ಣ ವ್ಯವಸ್ಥೆಯಲ್ಲಿ ಸಮನ್ವಯಗೊಳಿಸಿದ ಸಮಾನಭಾವ ಮತ್ತು ಉಭಯ ವೇದಾಂತ, ಮಾಧ್ವಮತದಲ್ಲಿ, ತಾರತಮ್ಯ ಕ್ರಮದಲ್ಲಿ ಸೇರಿದ ಶಿವಭಕ್ತಿ ಮತ್ತು ಯಜ್ಞಯಾಗಗಳಲ್ಲಿ ಹಿಂಸೆ, ತ್ಯಾಗ-ಇವು ಕನ್ನಡ ನಾಡಿನಲ್ಲಿ ನಡೆದ ವೈದಿಕ, ಅವೈದಿಕ ಮತ ಪಂಥಗಳ ಮಂಥನದಿಂದ ಹೊರಪಟ್ಟ ಸಮನ್ವಯದ ಗುರುತುಗಳಾಗಿವೆ" ಎಂಬ ಡಾ. ರಂ. ಶ್ರೀ ಮುಗಳಿಯವರ ಮಾತು ಅರ್ಥಪೂರ್ಣವಾಗಿದೆ. ಅಂತೆಯೇ ಕನ್ನಡ ಸಾಹಿತ್ಯವು ಅಖಂಡವಾಗಿ ಪ್ರಸ್ತಾಪಿಸಿದ್ದು, "ಮಾನವಜನ್ಮ ದೊಡ್ಡದು" ಎಂಬ ಮಾತನ್ನು.

ಸಮಗ್ರವಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಿಂಹಾವಲೋಕನ ಕ್ರಮದಿಂದ ಗಮನಿಸಿದಾಗ ಮೇಲೆ ತಿಳಿಯಪಡಿಸಿದ ತಳಹದಿಯ ಮೇಲೆ ಕನ್ನಡ ಸಾಹಿತ್ಯವು ಪಂಪನಿಂದ ಇಲ್ಲಿಯವರೆಗೆ ಅನೇಕ ಮೇರು ಕೃತಿಗಳನ್ನು ಪ್ರಪಂಚಕ್ಕೆ ನೀಡಿದೆ. ಮಾನವ ಜನ್ಮ ಧರ್ಮದ ಹಿರಿಮೆಗರಿಮೆಗಳನ್ನು ಎತ್ತಿ ತೋರಿಸಿದೆ. ಪಂಪನ 'ಆದಿಪುರಾಣ', ರಾಘವಾಂಕನ 'ಹರಿಶ್ಚಂದ್ರ ಕಾವ್ಯ', ಕುಮಾರವ್ಯಾಸನ 'ಕರ್ನಾಟ ಭಾರತ ಕಥಾಮಂಜರಿ', ರತ್ನಾಕರನ 'ಭರತೇಶವೈಭವ', ಜಗನ್ನಾಥದಾಸರ 'ಹರಿಕಥಾಮೃತಸಾರ' ಬೇಂದ್ರೆಯವರ ಭಾವಗೀತೆಗಳು, ಕುವೆಂಪು

ಅವರ 'ರಾಮಾಯಣದರ್ಶನಂ', ಮಾಸ್ತಿಯವರ 'ಸಣ್ಣಕತೆಗಳು', ಕಾರಂತರ 'ಕಾದಂಬರಿಗಳು' ಗೋಕಾಕರ 'ಭಾರತಸಿಂಧುರಶ್ಮಿ' ಇತ್ಯಾದಿ ಕನ್ನಡ ಕೃತಿಗಳು ಕಲಾದೃಷ್ಟಿಯಿಂದಲೂ ಭವ್ಯ ಜೀವನದರ್ಶನ ನೀಡುವ ದೃಷ್ಟಿಯಿಂದಲೂ ಅಪರೂಪವಾದ ಕೃತಿಗಳು. ಶಿವಶರಣರ ವಚನಗಳು ಮತ್ತು ದಾಸರ ಕೀರ್ತನೆಗಳಂತೂ ಕನ್ನಡ ಸಾಹಿತ್ಯದ ಬಹು ಪ್ರಮುಖ ಭಾಗಗಳೆಂದರೆ ಅತಿಶಯೋಕ್ತಿಯೇನಲ್ಲ. ಇವೆರಡೂ ಪ್ರಕಾರಗಳು ಆಧ್ಯಾತ್ಮಿಕವಾದ ಜೀವನ ನಿಷ್ಠೆಯನ್ನು ನಿರಾತಂಕವಾಗಿ ಬೇಸರಿಲ್ಲದೆ ನಾಡಿನಲ್ಲಿ ಬೋಧಿಸಿವೆ. ಆ ಬೋಧನೆಯ ಪ್ರಭಾವವು, ಇಂದಿನ ಜೀವನ ಮೌಲ್ಯಗಳಿಗೂ ಸ್ಫೂರ್ತಿಯಾಗಿ ನಿಂತಿದೆ. ಆ ಜೀವನ ಮೌಲ್ಯಗಳು ಒಂದು ಗುಂಪಿಗೆ, ಒಂದು ಜನಾಂಗಕ್ಕೆ ಸೀಮಿತವಾದುವಲ್ಲ. ಸಮಗ್ರ ಜಗತ್ತಿಗೆ ಬೇಕಾದುವುಗಳು. ಇದೇ ಪ್ರಕಾರ ಜೈನರ ಕಾವ್ಯಗಳಲ್ಲಿಯೂ ಆ ರಾಜಮಾರ್ಗವನ್ನು ಕಾಣುತ್ತೇವೆ. ಒಟ್ಟಾರೆ ಕನ್ನಡ ಸಾಹಿತ್ಯದ ಯಾವ ಅಂಚಿನಲ್ಲಿ ಬೆರಳಿಟ್ಟರೂ ಜೀವನ ಶಕ್ತಿಯನ್ನು ನೀಡುವ ಜ್ಯೋತಿರ್ಲಿಂಗಗಳು ನಮ್ಮ ಕಣ್ಮನಗಳಿಗೆ ಗೋಚರವಾಗುತ್ತವೆ.

"ಮನುಷ್ಯ ಜಾತಿ ತಾನೊಂದೆವಲಂ"
"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ"
"ಅಯ್ಯಾ ಎನೆ ಸ್ವರ್ಗ, ಎಲವೊ ಎನೆ ನರಕ"
"ತನ್ನ ತಾನರಿದಡೆ ತನ್ನರಿವೆ ಗುರು"
"ಈಸಬೇಕು, ಇದ್ದು ಜಯಿಸಬೇಕು"
"ಮಾನವ ಜನ್ಮ ದೊಡ್ಡದು, ಇದಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ"
"ಬಿಲ್ಲಾಗಿರಬೇಕು ಬಲ್ಲವರೊಳು, ಕಲ್ಲಾಗಿರಬೇಕು ಕಠಿಣಭವ ತೆರೆಯೊಳು"
"ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು"
"ಸಮರಸವೆ ಜೀವನ"

–ಎಂಬಂತಹ ಕೋಟ್ಯಂತರ ಜ್ಯೋತಿರ್ಲಿಂಗಗಳನ್ನು ವಿಶ್ವದ ಬೊಕ್ಕಸಕ್ಕೆ ಬಳುವಳಿಯಾಗಿ ಕೊಟ್ಟಿದೆ. ಜಗತ್ತಿನ ತವನಿಧಿಯೆಂದು ಸಾಬೀತು ಮಾಡಿದೆ. ಅಂತೆಯೇ.

I am afraid it must be confessed that kanarse writers, highly skilful though they are in the manipulation of then language and very pleasing to listen to in the original have as yet contributed extremely little to the stock of the world's knowledge and inspiration .....there is little of original and imperishable thought on the questions of perennial interest to man .... hence a lack of great enterprises".

– ಎಂದು ಅರ್ಥಜ್ಞಾನದಿಂದಲೂ ಪೂರ್ವಗ್ರಹಪೀಡಿತದಿಂದಲೂ ಹೇಳಿದ ಶ್ರೀ ಈ. ಪಿ. ರೈಸರ ಅಭಿಪ್ರಾಯವನ್ನು ಈಗ ತಿದ್ದಿಕೊಳ್ಳಬೇಕು ಮತ್ತು ಜಗತ್ತಿಗೇ ತವನಿಧಿಯಾಗಿ ನಿಲ್ಲಬಲ್ಲ ಶಕ್ತಿಯುಳ್ಳ ಕನ್ನಡ ಸಾಹಿತ್ಯವು ಮಾನವನಿಗೆ ಜೀವನ ಮೌಲ್ಯಗಳನ್ನು ನೀಡುವಾಗ ಬಹುಪಾಲು ಭಕ್ತಿರಸದ ಎರಕದಲ್ಲಿ ಸಾರ್ಥಕವಾಗಿದೆಯೆಂದು ಸದಾ ನೆನಪಿನಲ್ಲಿಡಬೇಕು.

೧೨ ನೆಯ ಶತಮಾನದಲ್ಲಿ ಮೂಡಿ ಬಂದ ವಚನ ಸಾಹಿತ್ಯದ ನಂತರ ಸುಮಾರು ೧೩ನೆಯ ಶತಮಾನದಿಂದೀಚೆಗೆ ಭಾಗವತಭಕ್ತಿ ಸಾಮಾನ್ಯರ ಹಿತಕ್ಕಾಗಿ ಸ್ಫೂರ್ತಿಯನ್ನು ಒದಗಿಸಲು ಮುಂದು ಬರಲಿಚ್ಛಿಸಿ ಸುಮಾರು ೧೬ನೆಯ ಶತಮಾನದಿಂದ, "ಸಮಾಜದ ಉನ್ನತಿಗೆ ಸುಲಭಮಾರ್ಗವನ್ನು ತೋರಿಸಿ ಧರ್ಮವನ್ನು ಸಾರ್ವಜನಿಕವಾಗಿ ಮಾಡುವ ಸದುದ್ದೇಶದಿಂದ ಮಧ್ವಹರಿದಾಸರು ಉದಯಿಸಿದರು". (ಕನ್ನಡವಕ್ಕಿ) ಮತ್ತು ಬಹು ಪ್ರಭಾವಿಯಾಗಿ ನೂರಾರು ಕೃತಿಗಳನ್ನು ಅವರು ಸ್ವಯಂ ಸ್ಫೂರ್ತಿಯಿಂದ ರಚನೆಮಾಡಿ ಓಣಿ ಓಣಿಗಳಲ್ಲಿ ಗೆಜ್ಜೆ ಕಟ್ಟಿಕೊಂಡು ಕುಣಿದು ಕುಣಿದು ಹಾಡಿದರು. ಸಾಮಾನ್ಯ ಮಾನವನ ಕಲ್ಯಾಣಕ್ಕಾಗಿ ಹೆಣಗಾಡಿದರು. ಸಾರ್ವಕಾಲಿಕವಾದ ಬದುಕುವ ಕಲೆಯನ್ನು ಮಧ್ವಾಚಾರ್ಯರು ನಿರೂಪಿಸಿದ ದ್ವೈತ ಸಿದ್ಧಾಂತದ ಹೆದ್ದಾರಿಯಲ್ಲಿ ಮನದಟ್ಟು ಮಾಡಿಕೊಟ್ಟು ಅದರಂತೆ ಜನರನ್ನು ನಡೆಸಿ ಸಂತೃಪ್ತಿಯನ್ನುಂಟು ಮಾಡಿದರು. ಈ ರೀತಿ ಮೂಡಿ, ಬೆಳಕು ಮಾಡಿ ಬೀರಿದ ಸಾಹಿತ್ಯವನ್ನು ದಾಸಸಾಹಿತ್ಯವೆಂದು ಕರೆಯುತ್ತೇವೆ. ಇದು ಕನ್ನಡ ಸಾಹಿತ್ಯದ ತವನಿಧಿಯಲ್ಲಿ ಎಂದೆಂದಿಗೂ ಕುಂದದ ಕಲ್ಲು ಸಕ್ಕರೆಯ ಖಣಿ. ಭಕ್ತಿರಸದಿಂದ ತುಂಬಿದ ಕ್ಷೀರ ಸಮುದ್ರ.

ಈ ದಾಸ ಸಾಹಿತ್ಯವು ಮಧ್ವಾಚಾರ್ಯರು ಅರ್ಥವಿಸಿದ ದ್ವೈತಸಿದ್ಧಾಂತವನ್ನು ಅರ್ಥಾತ್ ಅತ್ಯಂತ ನಿಚ್ಚಳವಾದ ರೀತಿಯಲ್ಲಿ ಪಾರಮಾರ್ಥಿಕ ಹಾಗೂ ಲೌಕಿಕ ಸತ್ಯಗಳನ್ನು ನಿರೂಪಿಸುವ ಸಂಪತ್ತು; ಮನುಷ್ಯನ ಬದುಕನ್ನು ತಿಳವಳಿಕೆಯ ನಿಲುವಿನಲ್ಲಿಯೇ ಆನಂದಮಯವಾಗಿಸುವ ಸಾಧನಮಾರ್ಗ. ವಿಶಿಷ್ಟವಾಗಿ ಹೇಳಬೇಕಾದರೆ, ಇದು ಎಲ್ಲ ಶಾಸ್ತ್ರಗಳ ಸಮನ್ವಯದೊಂದಿಗೆ ಸಾಕ್ಷಾತ್ಕಾರವನ್ನು ಒದಗಿಸಿಕೊಡುತ್ತದೆ. ಇಲ್ಲಿ ನಿರ್ದಿಷ್ಟವಾದ ಲೋಕಾನುಭವಕ್ಕೆ ಪ್ರಾಶಸ್ತ್ಯವಿರುವುದರಿಂದ, ಜಡ, ಜೀವ, ಈಶ್ವರ ಇವುಗಳಲ್ಲಿಯ ಪರಸ್ಪರ ಅತ್ಯಂತ ಪಾರಮಾರ್ಥಿಕ ಭೇದವು ಸೂಕ್ಷ್ಮಾತಿ ಸೂಕ್ಷ್ಮದ ಕ್ಷಕಿರಣವನ್ನು ತೋರಿಸಿಕೊಡುತ್ತದೆ. ಅಂತೆಯೇ ತಾರತಮ್ಯವಿಲ್ಲದೆ ಪರಮಾತ್ಮನ ನಿಜಜ್ಞಾನ ಅಸಾಧ್ಯವೆಂದೂ ದಾಸಾರ್ಯರೆಲ್ಲ ಹೇಳಿದ್ದಾರೆ. ಅದಕ್ಕಾಗಿ ಅವರು ನಿರೂಪಿಸುವ ವೇದಾಂತ ಪ್ರಮೇಯಗಳನ್ನು ಅರ್ಥಮಾಡಿಕೊಂಡರೆ ಬದುಕು ಸಾರ್ಥಕವಾಗುತ್ತದೆ. ಆ ಪ್ರಮೇಯಗಳು.

"ಶ್ರೀ ಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂಗತಾಃ ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ಹ್ಯಕ್ಷಾದಿತ್ರಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋಹರಿಃ

ಎಂಬ ಸೂತ್ರರೂಪದ ಶ್ಲೋಕದಲ್ಲಿ ನಿರೂಪಿತವಾಗಿವೆ. ಇಲ್ಲಿ ಮಧ್ವಾಚಾರ್ಯರು ನಿರೂಪಿಸಿದ ೧. ಶ್ರೀ ಹರಿ ಸರ್ವೋತ್ತಮ ವಾಯುಜೀವೋತ್ತಮ ೨. ಜಗತ್ತು ಪಾರಮಾರ್ಥಿಕ ಸತ್ಯ. ೩. ಪಂಚಭೇದವು: ಪಾರಮಾರ್ಥಿಕ ಸತ್ಯ ಮತ್ತು ನಿತ್ಯ. ೪. ಜೀವಗಣಗಳು ಶ್ರೀ ಹರಿಯ ಅನುಚರರು (ಪ್ರತಿಬಿಂಬರು) ೫. ನಿತ್ಯ ತಾರತಮ್ಯವುಳ್ಳವರು. ೬. ಸ್ವರೂಪ ಸುಖಾನುಭವವೇ ಮುಕ್ತಿ. ೭. ನಿರ್ಮಲವಾದ ಭಕ್ತಿಯು ಮುಕ್ತಿಗೆ ಸಾಧನ. ೮. ಪ್ರತ್ಯಕ್ಷ. ೯. ಶ್ರೀಹರಿಯು ಆಗಮ ಮಾತ್ರ ವೇದ್ಯನು–ಎಂಬ ತತ್ವವಾದವು ಅಂಗೈನೆಲ್ಲಿಯಾಗಿವೆ.

ಇದೇ ದ್ವೈತ ಸಿದ್ಧಾಂತದ ಬಹು ಮುಖ್ಯಭಾಗ. ಅದನ್ನು ಹರಿದಾಸರು ಅರ್ಥಾತ್ ದಾಸಸಾಹಿತ್ಯವು ಬಹು ಸುಲಭವಾದ ರೀತಿಯಲ್ಲಿ ವಿವರಿಸುತ್ತದೆ.

ದ್ವೈತ ಸಿದ್ಧಾಂತದ ಬಹು ಮುಖ್ಯ ಪ್ರಮೇಯವು ಶ್ರೀಹರಿ ಸರ್ವೋತ್ತಮ ಎಂಬುದು. ಆತನು ದೀನರಕ್ಷಕನು. ರೂಪ, ಅರೂಪ, ವ್ಯಕ್ತ, ಅವ್ಯಕ್ತ, ಸುಗುಣ, ನಿರ್ಗುಣನಾಗಬಲ್ಲನು. ಅವನ ಸ್ವರೂಪವನ್ನು ಪುರಂದರದಾಸರು ಹೀಗೆ ವರ್ಣಿಸಿದ್ದಾರೆ.

"ಅಕೋ ಹಾಂಗಿದಾನೆ ಇಕೋ ಹೀಂಗಿದಾನೆ
ಪರಬ್ರಹ್ಮ ನಾರಾಯಣ ಹ್ಯಾಂಗಿಹನೆಂದರೆ : ಪ :
ಕಾಲಿಲ್ಲದೆ ನಡಿಸುವ ಕೈಯಿಲ್ಲದೆ ಹಿಡಿಸುವ
ಹಲ್ಲಿಲ್ಲದೆ ತಿನಿಸುವ ಹೊಟ್ಟಿಲ್ಲದೆ ಉಣಿಸುವ : ೧ :
ಕಣ್ಣಿಲ್ಲದೆ ಕಾಣಿಸುವ ಕಿವಿಯಿಲ್ಲದೆ ಕೇಳಿಸುವ
ಕಣ್ಣಿಗೆ ಕಾಣಿಸದಂತೆ ಒಳಗೆ ಹೊರಗೆ ತುಂಬಿರುವ : ೨ :
ಶ್ವೇತ ದ್ವೀಪದಲ್ಲಿ ಕುಳಿತನಂತಾಸನದಿ ಮಲಗಿದ
ಖ್ಯಾತ ವೈಕುಂಠದಲಿ ನಿಂತನಾಥ ಪುರಂದರ ವಿಠಲನೀತ : ೩ :

ಇಂತಹ ಸರ್ವಾತ್ಮನು ನರಚಿತ್ತಕ್ಕೆ ಬಂದದ್ದನ್ನು ಲವಲೇಶವೂ ನಡೆಸ. ತನ್ನ ಚಿತ್ತವನ್ನೇ ಸತ್ಯವೆನ್ನುವ. ಆದ್ದರಿಂದ ಈ ಪ್ರಪಂಚದಲ್ಲಿ

"ಹರಿ ನಡೆಯದಿರಲು ನಡೆಯದೆಲ್ಲ ಜಗ
ಹರಿ ನುಡಿಯದಿರಲು ನುಡಿಯದೆಲ್ಲ ಜಗ
ಹರಿ ನೋಡದಿರಲು ನೋಡದೆಲ್ಲ ಜಗ
. . . . ಹರಿ ಸರ್ವ ಪ್ರೇರಕ ಪುರಂದರ ವಿಠಲ
ಹರಿಯಾಡಿಸಿದಂತಾಡುದಿಪ್ಪುದು ಜಗ : : "

ಅಂತೆಯೇ ಮಾಯಾರೂಪಳಾದ ಲಕ್ಷ್ಮೀ ದೇವಿಯನ್ನು ಸೃಷ್ಟಿಯಲ್ಲಿ ಹರಿಯು ಪ್ರೇರಿಸುವನು. ಈಕೆಯ ಮುಖಾಂತರ ಬ್ರಹ್ಮಾಂಡದ ವ್ಯಾಪಾರಗಳೆಲ್ಲ ನಡೆಯುತ್ತವೆ. ಈಕೆ ನಿತ್ಯಮುಕ್ತಳು. ಹರಿಗೆ ಮಾತ್ರ ಅಧೀನಳು. ಸಕಲ ಜೀವನಿಯಾಮಕಳು. ಅಂತೆಯೇ ದಾಸಾರ್ಯರು ಈ ಜಗತ್ತು ಪಾರಮಾರ್ಥಿಕ ಸತ್ಯವೆಂದು ಸತ್ಯಜಗಕಿದು ಪಂಚಭೇದವು ನಿತ್ಯ ಎಂದು ಸಾರಿ, 'ನೀನು ಕುಣಿದಂತೆ – ನಾನು ಕುಣಿವೆನಯ್ಯಾ ? ಎಂದು ಪರಮಾತ್ಮನು ಬಿಂಬನೆಂದು ತೋರಿಸಿಕೊಟ್ಟಿದ್ದಾರೆ. ಆ ಮುಖಾಂತರ ಮುಕ್ತಿ – ನೈಜ ಸುಖಾನುಭವವನ್ನು ಸಾಧಕರಿಗೆ ಮಾಡಿಸಿಕೊಟ್ಟಿದ್ದಾರೆ.

ಇಂತಹ ಮುಕ್ತಿಯು ಲಭ್ಯವಾಗಬೇಕಾದರೆ, ಭಕ್ತಿಯೇ ಮುಖ್ಯ ಸಾಧನ. ಇದು ಯೋಗ್ಯ ಗುರುವಿನ ಮುಖೇನ ದೊರೆಯಬೇಕು. ಇದನ್ನು ಸ್ಪಷ್ಟವಾಗಿ ಪುರಂದರದಾಸರು

"ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ
ಪರಿಪರಿ ಶಾಸ್ತ್ರವ ನೋಡಿದರೇನು ವ್ಯರ್ಥವಾಯಿತು ಮುಕುತಿ

ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು
ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು

ಎಂದು ತಿಳಿಸಿದ್ದಾರೆ. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಆತ್ಮ ನಿವೇದನ, ಮೊದಲಾದ ಭಕ್ತಿಯ ವಿವಿಧ ರೂಪಗಳ ಮುಖಾಂತರ ಪರಮಾತ್ಮನನ್ನು ಕೊಂಡಾಡಿದ್ದಾರೆ. ಎಲ್ಲ ನಿಟ್ಟಿನಲ್ಲಿಯೂ ಸ್ವಾಮಿ – ಭೃತ್ಯ ಭಾವವನ್ನು ಒತ್ತಿ ಹೇಳಿದ್ದಾರೆ.

"ನಿನ್ನ ದಾಸರ ದಾಸ್ಯವ ಲೇಸಾಗಿ ಕೊಡು ಕಂಡ್ಯ ಪುರಂದರ ವಿಠಲ"
"ದಾಸನಾದವಗೆ ವೈಕುಂಠದಲ್ಲಿ ವಾಸ; ದಾಸನಾಗದವನೆಲ್ಲಿ ಹೋದರಾಭಾಸ"
"ಹರಿನಾಮ ಹರಿಪಾದ ತೀರ್ಥವಿರಲು . . . ದುರಿತಭಯವೇಕೆ? ನರಕದ ಭೀತಿಯಾಕೆ ?"
"ಶ್ರೀ ಕೃಷ್ಣನ ದಾಸರ ಸಂಗವಿರಲು ದುರಿತ ಭಯವೆ?
ದುರಿತ ತಿಮಿರಕ್ಕೆ ತರಣಿ ತಾನಲ್ಲವೆ?
ಕಾಗಿನೆಲೆಯಾದಿ ಕೇಶವನ ಭಕ್ತ ಮುಕ್ತ "
"ಭಕ್ತಿಗೆ ಕೇಡಿಲ್ಲ ಅನಂತ ಕಲ್ಪಕ್ಕೂ : ಭಕ್ತಿಪಡಿಯಿರೋ ವಿಜಯ ವಿಠ್ಠಲನಲ್ಲಿ"

ಎಂಬಂತಹ ಮಾತುಗಳಲ್ಲಿ ಭಕ್ತಿಮಾರ್ಗವು ಆತ್ಮವಿಶ್ವಾಸವನ್ನು ಮೂಡಿಸಿದೆ. ಮಾನವ ಜನ್ಮ ದೊಡ್ಡದು. ಇದನ್ನು ಹಾನಿಗೊಳಿಸಿದೆ ಈಸಬೇಕು, ಇದ್ದು ಜೈಸಬೇಕು ಎಂದಿದೆ. ಇದನ್ನೇ ನಾವು 'ವೀರಯೋಗ' ಎಂದು ಕರೆಯಬೇಕು. ಇಂತಹ ಯೋಗವನ್ನು ಸಾಧಿಸಿದ ಯೋಗಿಯು, ಲೋಕ ಜೀವನದ ಪರಿಶುದ್ಧತೆಗೆ ಜಾತಿಮತ ಪಂಥಗಳನ್ನು ಮೀರಿ ಕೆಳಗಿನಂತೆ ನಡೆಯುತ್ತಾನೆ. ನುಡಿಯುತ್ತಾನೆ.

"ವಿಷವನುಣಿಸಿದವಗೆ ಷಡ್ರಸವನುಣಿಸಲು ಬೇಕು
ದ್ವೇಷ ಮಾಡುವವನ ಪೋಷಿಸಲುಬೇಕು
ಹುಸಿದು ಮನಕೊಂಬುವನ ಹಾಡಿ ಹರಸಲುಬೇಕು
ಅಸು ಹೀರಿದವನ ಹೆಸರ ಮಗನಿಗಿಡಬೇಕು
ಕೊಂಡೊಯ್ದು ಕೆಡಿಸುವನ ಕೊಂಡಾಡುತಿರಬೇಕು
ಕಂಡರಾಗದವರ ತಾ ಕರೆಯಬೇಕು
ಪುಂಡರಿಕಾಕ್ಷ ಶ್ರೀ ಪುರಂದರ ವಿಠ್ಠಲನ ನೆನೆಯಬೇಕಯ್ಯಾ ॥"

ಎಂಬ ಸೂಕ್ಷ್ಮಾತಿ ಸೂಕ್ಷ್ಮವನ್ನು ತಿಳಿದುಕೊಂಡು ಅಸಂಖ್ಯ ಆನಂದಮಯವನ್ನು ಕಂಡು ಬಿಡುತ್ತಾನೆ. ಅಂತಹನು

"ಹೇಸಿಕೆ ಸಂಸಾರದಲ್ಲೆ ಆಶಾ ಲೇಸ ಮಾಡದ್ಹಾಂಗೆ
ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿರಾಮನೆನುತ ಪಾಡಿಕಾಮಿತ ಕೈಗೊಂಬರೆಲ್ಲ

ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡಿದ್ದಾಂಗೆ ಧೀರ ಕೃಷ್ಣನ ನೆನೆವರೆಲ್ಲ
ಮಾಂಸದಾಸೆಗೆ ಮತ್ಸ್ಯಸಿಲುಕಿ ಹಿಂಸೆ ಪಟ್ಟ ಪರಿಯಂತೆ
ಮೋಸ ಹೋಗದ್ದಾಂಗೆ ಜಗದೀಶ ಪುರಂದರ ವಿಠ್ಠಲನೆನುತ : :
ಬದುಕುವ ಕಲೆಯಲ್ಲಿ ನಿಷ್ಣಾತನಾಗಿ
"ಪರರು ಮಾಡಿದ ಪಾತಕವ ನಾಲಗೆಯೊಳುಚ್ಚರಿಸದೆಚ್ಚರಿಕೆ
ಗುರುಹಿರಿಯರ ಸೇವೆ ಮಾಡದೆ ಉದರವ ಹೊರೆಯದಿರೆಚ್ಚರಿಕೆ
ಹೀನಮಾನಿನಿಯರ ಧ್ಯಾನಕಾನನದೊಳಗಿಳಿಯದಿರೆಚ್ಚರಿಕೆ –
ನಾನೆಂಬ ಅಹಂಕಾರ ಮಾಡಿ ನರಕದೊಳು ನರಳದಿರೆಚ್ಚರಿಕೆ –
ನಡೆವಾಗ ನುಡಿವಾಗ ಗಿಡವೆಲ್ಲ ನಂಟರು ಕಡೆಗಿಲ್ಲ ಎಚ್ಚರಿಕೆ –

ಎಂಬಂತಹ ಎಚ್ಚರಿಕೆಗಳಿಂದ ಮೈಯೆಲ್ಲ ಕಣ್ಣಾಗಿ ಮನವೆಲ್ಲ ಶ್ರೀಹರಿಯ ನೆನಹಾಗಿ ಸರ್ವಸಮರ್ಪಣಾ ಭಾವದಿಂದ ಜೀವನ್ಮುಕ್ತನಾಗುತ್ತಾನೆ. ಅಂತಹನಿಗೆ ಶ್ರೀ ಹರಿಯ ಪೂಜೆ ಬಹು ಸುಲಭ. ಅದೇ ದಾಸ ಸಾಹಿತ್ಯ. ಅದರ ಸೊಗಸು ಇಂತಿದೆ:

"ಸುಲಭ ಪೂಜೆಯ ಕೇಳಿ ಬಲವಿಲ್ಲದವರು
ಕಾಲಕಾಲದ ಕರ್ಮ ಕಮಲಾಕ್ಷಗರ್ಪಿಸಿರಿ : ಪ :
ಇರುಳು ಹಚ್ಚುವ ದೀಪ ಹರಿಗೆ ನೀರಾಜನವು
ಮರುವುಡುವ ಧೋತರವು ಪರಮ ವಸ್ತ್ರ
ತಿರುಗಾಡಿ ದಣಿಯುವುದು ಹರಿಗೆ ಪ್ರದಕ್ಷಿಣೆಯು
ಮರಳಿ ಹೊಡ ಮರುಳುವುದು ನೂರೆಂಟು ಗಂಡ : ೧ :
ನುಡಿವ ಮಾತುಗಳೆಲ್ಲ ಪಾಂಡುರಂಗನ ಜಪವು
ಮಡದಿ ಮಕ್ಕಳು ಎಲ್ಲ ಒಡನೆ ಪರಿವಾರ
ನಡುಮನೆಯ ಅಂಗಳವು ಉಡುಪಿ ಭೂವೈಕುಂಠ
ಎಡ ಬಲದ ಮನೆಯವರು ಕಡು ಭಾಗವತರು : ೨ :
ಹೀಗೆ ಈ ಪರಿಯಲಿ ನಿತ್ಯ ನೀನಿರುತ್ತಿರಲು
ಜಗದೊಡೆಯ ಶ್ರೀ ಕೃಷ್ಣದಯವ ತೋರುವನು
ಬೇಗದಿ ತಿಳಿದು ಕೇಳಿ ಹೋಗುತಿದೆ ಆಯುಷ್ಯ
ಯೋಗಿ ಪುರಂದರ ವಿಠ್ಠಲ ಸಾರಿ ಪೇಳಿದನು : ೩:

ಇದುವೇ ನಿರ್ಲಿಪ್ತ ಸಂಸಾರ ಯೋಗದ ಸಾರ. ಇದನ್ನು ತಿಳಿದವನು ಸಾಲ ಮಾಡದೆ ಸಾಲದೆಂದೆನ್ನದೆ, ಎಲ್ಲರಿಗೂ ಕೌತುಕವಾಗುವ ರೀತಿಯಲ್ಲಿ ಬಾಳುವವರ ಸಂಗದಲ್ಲಿ ಬದುಕುತ್ತಾನೆ. ಸದಾ ಶ್ರೀಕಾಂತನನ್ನೇ ನೋಡುತ್ತ, ಕೇಳುತ್ತ, ಆಡುತ್ತ, ನೆನೆಯುತ್ತ, ಗಂಡುಗಲಿಯಾಗಿ ಬಾಳುತ್ತಾನೆ.

ಈ ಸತ್ವದ ನೆರೆಯಲ್ಲಿ ದಾಸ ಸಾಹಿತ್ಯವು ಪಂಪಯುಗದಲ್ಲಿಯೇ ಎಂದರೆ ಕ್ರಿ. ಶ.

೮೭೯ರ ಸುಮಾರಿಗೇ ಅಚಲಾನಂದರ ಪದ, ಉಗಾಭೋಗಗಳಿಂದಲೇ ಆರಂಭವಾಯಿತೆಂಬ ಬೇಲೂರ ಕೇಶವದಾಸರ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪದೇ ಇದ್ದರೂ ೧೨ನೆಯ ಶತಮಾನದಿಂದ ಇಲ್ಲಿಯವರೆಗೆ ದಾಸಸಾಹಿತ್ಯವು ಸತ್ವಯುತವಾಗಿಯೇ ಬೆಳೆದು ಬಂದಿದ್ದು ಮಾನವ ಧರ್ಮವನ್ನು ಜಾಗೃತಗೊಳಿಸುತ್ತ ಸಾಗಿರುವುದೆಂಬುದನ್ನು ಅಲ್ಲಗಳೆಯುವಂತಿಲ್ಲ. ಈ ರೀತಿಯ ದಾಸಸಾಹಿತ್ಯ ಪರಂಪರೆಯ ಬೆಳೆವಣಿಗೆಯಲ್ಲಿ ರಾ. ಸ್ವ ಪಂಚಮುಖಿಯವರು ನಾಲ್ಕು ಘಟ್ಟಗಳನ್ನು ಪ್ರಸ್ತಾಪಿಸುತ್ತ "ಒಂದನೆಯದು ಮಧ್ವಾಚಾರ್ಯರ ಕಾಲದಲ್ಲಿ ಅವರ ಶಿಷ್ಯಸಂಘವು ನರಹರಿ ತೀರ್ಥರ ನೇತೃತ್ವದಲ್ಲಿ ಪ್ರಕಟಮಾಡಿದ್ದು. ಎರಡನೆಯದು ಕೃಷ್ಣ ದೇವರಾಯನ ಕಾಲದಲ್ಲಿ ಪುರಂದರದಾಸ, ಕನಕದಾಸರು, ವ್ಯಾಸರಾಯರ ಗುರುತ್ವದಲ್ಲಿ ಅಭಿವ್ಯಕ್ತಿಗೊಳಿಸಿದ್ದು. ಮೂರನೆಯದು ವಿಜಯದಾಸ ಮುಂತಾದ ದಾಸ ವೃಂದವು ಸೃಷ್ಟಿ ಮಾಡಿದ್ದು. ನಾಲ್ಕನೆಯದು ಪ್ರಾಣೇಶ, ಗುರು ಪ್ರಾಣೇಶದಾಸ, ಮುಂತಾದವರು ರಚಿಸಿದ್ದು" ಎಂದು ಹೇಳಿದರೆ, ಇದನ್ನೇ ಡಾ. ಎಚ್. ಕೆ. ವೇದವ್ಯಾಸಾಚಾರ್ಯರು, ಆರಂಭಕಾಲ, ಉನ್ನತಿಯ ಕಾಲ, ವಿಸ್ತಾರ ಕಾಲ, ಅವನತಿಯ ಕಾಲ ಎಂದು ಸೂಚಿಸಿದರು. ಇಲ್ಲಿ ಅವರು ಅವನತಿಯ ಕಾಲವೆನ್ನುವುದಕ್ಕಿಂತ ಸಾಮಾನ್ಯಕಾಲವೆಂದೋ ಅಥವಾ ಮತ್ತೆ ಸಮಂಜಸವಾದ ಬೇರೆ ಹೆಸರಿನಿಂದಲೋ ಕರೆಯಬಹುದಿತ್ತೇನೋ ಎನ್ನಿಸುತ್ತದೆ. ಏಕೆಂದರೆ ಇತ್ತೀಚಿನ ದಶಕಗಳಲ್ಲಿಯೂ ಶಾಮ ಸುಂದರವಿಟ್ಠಲದಾಸ, ರಾಮದಾಸ, ಭೀಮದಾಸ ಇತ್ಯಾದಿ ದಾಸರಿಂದ ದಾಸಪರಂಪರೆಗೆ ಚ್ಯುತಿಯೇನೂ ಬಂದಿಲ್ಲ. ಹೊಸಕಾಲದ ಸತ್ವಗಳನ್ನೆಲ್ಲ ಅಳವಡಿಸಿಕೊಂಡು ಬೆಳೆಯುತ್ತ ನಡೆದಿದೆ. ಡಾ. ತಿಪ್ಪೇರುದ್ರಸ್ವಾಮಿಯವರು ಇದೇ ವಿಷಯವನ್ನು ಕುರಿತು, "ವಿಭಾಗದ ದೃಷ್ಟಿಯಿಂದ ಹೀಗೆ ನಾಲ್ಕು ಮೆಟ್ಟಲುಗಳನ್ನು ಮಾಡಬಹುದಾದರೂ ವಿಶಿಷ್ಟಶಕ್ತಿ ಮತ್ತು ಸಾಂಸ್ಕೃತಿಕ ಪ್ರಭಾವದ ದೃಷ್ಟಿಯಿಂದ ನೋಡಬಹುದಾದು ಒಂದೇ ಘಟ್ಟ; ಅದೆಂದರೆ ಪುರಂದರದಾಸರ ಯುಗ" ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕರ್ನಾಟಕ ವಿಶ್ವವಿದ್ಯಾನಿಲಯವು ಪ್ರಕಟಿಸಿದ, ದಾಸಸಾಹಿತ್ಯ: 'ದ್ವಿತೀಯ ಘಟ್ಟದ ಸಾಧನೆ' ಎಂಬ ಪುಸ್ತಕದಲ್ಲಿ ದಾಸಸಾಹಿತ್ಯದ ಬೆಳೆವಣಿಗೆಯ ದೃಷ್ಟಿಯಿಂದ ಹನ್ನೆರಡನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೆ ಬೆಳೆದು ಬಂದ ಆ ಸಾಹಿತ್ಯವನ್ನು ನರಹರಿತೀರ್ಥರಿಂದ ಪುರಂದರ ಕನಕದಾಸರ ಜೀವಿತ ಕಾಲದ ಅವಧಿಯನ್ನು ಒಂದು ಘಟ್ಟವೆಂದೂ, ಮುಂದೆ ವಿಜಯದಾಸರ ಹಾಗೂ ತರುವಾಯದ ಅವಧಿಯನ್ನು ಇನ್ನೊಂದು ಘಟ್ಟವೆಂದೂ ಹೀಗೆ ಎರಡೇ ಪ್ರಧಾನ ಘಟ್ಟಗಳಾಗಿ ಎಣಿಸುವುದರಲ್ಲಿ ಸುಲಭವೂ ಔಚಿತ್ಯವೂ ಇದೆ. ಈ ಅವಧಿಗಳು ನರಹರಿತೀರ್ಥರ ಮತ್ತು ಶ್ರೀಪಾದರಾಯರ ನಡುವಿನ ಹಾಗೂ ಪುರಂದರ ಮತ್ತು ವಿಜಯದಾಸರ ನಡುವಿನ 'ಅಜ್ಞಾತ ಕಾಲ' ಗಳೆರಡನ್ನೂ ಒಳಗೊಳ್ಳುತ್ತವೆ" ಎಂದು ನಿರೂಪಿತವಾಗಿದೆ. ಸದ್ಯ ಇದೇ ವಿಭಾಗ ಕ್ರಮವೂ ಸರಿಯೆನಿಸುತ್ತದೆ.*

---

* ಪ್ರೊ. ಜಿ. ಅಬ್ದುಲ್ ಬಷೀರ್ ಅವರು ತಮ್ಮ ಇತ್ತೀಚಿನ ಹರಿದಾಸ ಸಾಹಿತ್ಯ ಎಂಬ ಕೃತಿಯಲ್ಲಿ ಅಧ್ಯಯನ ದೃಷ್ಟಿಯಿಂದ ಹರಿದಾಸ ಸಾಹಿತ್ಯವನ್ನು ನಾಲ್ಕು ಭಾಗಗಳನ್ನಾಗಿ ವಿಭಾಗಿಸಿದ್ದಾರೆ. ೧. ಪುರಂದರ ಪೂರ್ವದಾಸಸಾಹಿತ್ಯ. ೨. ಪುರಂದರ ಕಾಲದ ದಾಸ ಸಾಹಿತ್ಯ. ೩. ಪುರಂದರೋತ್ತರ ದಾಸಸಾಹಿತ್ಯ. ೪. ಮಹಿಳಾದಾಸ ಸಾಹಿತ್ಯ–ಸಂಪಾದಕರು.

ಈ ವಿಭಾಗ ಕ್ರಮವನ್ನು ಅನುಸರಿಸಿ ನೋಡಿದಾಗ ನರಹರಿತೀರ್ಥ, ಶ್ರೀಪಾದರಾಜ, ವ್ಯಾಸರಾಜ, ವಾದಿರಾಜ, ಪುರಂದರದಾಸ, ವೈಕುಂಠದಾಸ, ಕನಕದಾಸ ಇತ್ಯಾದಿ ಮಹನೀಯರು ಪ್ರಥಮ ಘಟ್ಟದಲ್ಲಿ ಬರುವ ಪ್ರಮುಖ ಹರಿದಾಸರು. ವಿಜಯದಾಸ, ಪ್ರಸನ್ನವೆಂಕಟದಾಸ, ಮೋಹನದಾಸ, ಗೋಪಾಲದಾಸ, ಜಗನ್ನಾಥದಾಸ, ಪ್ರಾಣೇಶದಾಸ, ಆನಂದದಾಸ, ಮಹೀಪತಿದಾಸ, ಶಾಮಸುಂದರದಾಸ, ರಾಮದಾಸ, ಅಥಣಿ ಭೀಮದಾಸ ಇತ್ಯಾದಿ ಇನ್ನೂ ಪ್ರಮುಖ ದಾಸರು ಎರಡನೆಯ ಘಟ್ಟದಲ್ಲಿ ಸಮಾವೇಶಗೊಳ್ಳುತ್ತಾರೆ. ದಾಸರು ಪುರುಷರೇ ಇರಬೇಕೆಂದೇನೂ ಇಲ್ಲ. ಸ್ತ್ರೀಯರೂ ಸಂನ್ಯಾಸಿಗಳೂ ದಾಸ ತತ್ತ್ವವನ್ನು ಪೋಷಿಸಿದ್ದಾರೆ. ಅದರ ಸತ್ತ್ವವನ್ನು ತಿರುಳ್ಗನ್ನಡದಲ್ಲಿ ಹಾಡಿ ಕುಣಿದಿದ್ದಾರೆ. ಈ ಮಾಲಿಕೆಯಲ್ಲಿ ಮಧ್ವಾಚಾರ್ಯರೂ (ತುಳು ಭಾಷೆಯಲ್ಲಿ ಕೆಲವು ಕೃತಿಗಳನ್ನು ಬರೆದಿರಬಹುದೆಂದು ಗಮನಿಸಿದೆ). ವಿಜಯೇಂದ್ರರು, ರಾಘವೇಂದ್ರರು, ವರದೇಂದ್ರರು ಇತ್ಯಾದಿ ಯತಿಗಳೂ ಗಮನಾರ್ಹರು. ಹೆಣ್ಣು ಮಕ್ಕಳ ಮಾಲಿಕೆಯಲ್ಲಿ ಹೆಳವನಕಟ್ಟೆ ಗಿರಿಯಮ್ಮ, ಆನಂದದಾಸರ ಮಗಳು ತುಂಗಮ್ಮ, ಹರಪನಹಳ್ಳಿ ಭೀಮವ್ವ ಮೊದಲಾದವರು ಪ್ರಮುಖರು. ಇವರಲ್ಲದೆ ನಮಗೆ ಗೊತ್ತಿಲ್ಲದೆ ಉಳಿದಿರುವ ಇನ್ನೂ ಅದೆಷ್ಟೋ ಅಜ್ಞಾತದಾಸರುಗಳು ಇರಬಹುದು. ಇದ್ದಾರೆ. ಆ ದಿಸೆಯಲ್ಲಿ ಸಂಶೋಧನೆಯು ತೀವ್ರಗತಿಯಲ್ಲಿ ನಡೆಯಬೇಕಾಗಿದೆ.

ಮಾನವ ಕಲ್ಯಾಣವೇ ತನ್ನ ಗುರಿಯಾಗಿಟ್ಟುಕೊಂಡು ಲೋಕಾನುಭವದೊಡನೆ ಲೋಕನೀತಿಯ್ನನ್ನು ಹೇಳಿ ಮೇಲೆ ಹೇಳಿದ ಮಹನೀಯರ ಪರಂಪರೆ ಅಮೂಲ್ಯವಾದ ದಾಸ ಪರಂಪರೆಯ ಸಾಹಿತ್ಯವನ್ನು ನಿರ್ಮಿಸಿರುವುದಷ್ಟೆ–ಈ ಮುನ್ನ ಜೈನ ಸಾಹಿತ್ಯವು ವಿಶೇಷವಾಗಿ ಚಂಪೂರೀತಿಯನ್ನು ಬಳಸಿಕೊಂಡರೆ, ವಚನಕಾರರು ಹೃದ್ಯವಾದ ಗೀತಗದ್ಯವನ್ನು ಬಳಸಿಕೊಂಡು ವಚನಸಾಹಿತ್ಯವನ್ನು ನಿರ್ಮಾಣ ಮಾಡಿದುದು. ಕನ್ನಡ ಸಾಹಿತ್ಯದ ಒಂದು ಪ್ರಮುಖವಾದ ಭಾಗವೇ ಆಯಿತು. ಆ ಪರಂಪರೆಯಲ್ಲಿ ಮುಂಬರುವ ಕವಿಗಳು ಷಟ್ಪದಿಗಳನ್ನು ಬಳಸಿ ಮಹಾಕಾವ್ಯಗಳನ್ನು ರಚನೆ ಮಾಡಿದರು. ಆಗಾಗ ಚಂಪೂವಿನ ಕೃತಿಗಳು ಬರದೇ ಇರಲಿಲ್ಲ. ಆದರೆ ದಾಸ ಪರಂಪರೆಯ ಸಾಹಿತ್ಯವು ದೇಸೀಯ ಛಂದಸ್ಸನ್ನೇ ಬಹುಮಟ್ಟಿಗೆ ಪ್ರಯೋಗದಲ್ಲಿ ತಂದು ಕನ್ನಡದ ಸಿರಿಯನ್ನು ಬೆಳಗಿಸಿತು. ಮಾರ್ಗದ ಸೊಗಸಿನ ಕೆಲವು ಛಂದಸ್ಸಿನ ಪ್ರಯೋಗಗಳನ್ನೂ ಜನ ಸಾಮಾನ್ಯರ ಹಿಡಿತಕ್ಕೆ ಸಿಗುವಂತೆ ಕನ್ನಡದ ಜಾಯಮಾನಕ್ಕೆ ಅಳವಡಿಸಿಕೊಂಡು ದಾಸ ದಾಸಿತ್ಯವು ವೈವಿಧ್ಯವನ್ನು ಹೆಚ್ಚಿಸಿಕೊಂಡಿತು.

ವೈವಿಧ್ಯಪೂರ್ಣವಾಗಿರುವ ದಾಸರ ಕೃತಿಗಳನ್ನು ದಾಸರ ಪದಗಳೆಂದೇ ಕರೆಯುವುದು ವಾಡಿಕೆ. ಈ ಪದಗಳಲ್ಲಿ ತತ್ತ್ವಪದಗಳು, ಸ್ತೋತ್ರಪದಗಳು, ಉಪದೇಶದ ಪದಗಳು, ಅನುಭವದ ಹಾಡುಗಳು, ಚಾರಿತ್ರಕ ಹಾಡುಗಳು-ಎಂದು ಇತ್ಯಾದಿ ವಿಭಾಗ ಮಾಡಬಹುದು. ಇವುಗಳನ್ನು ಅವರು ವಿಷಯಕ್ಕೆ ತಕ್ಕಂತೆ, ಸಂದರ್ಭಕ್ಕೆ ತಕ್ಕಂತೆ ಆಯಾ ಬಂಧಗಳಲ್ಲಿ ರಚಿಸಿದ್ದಾರೆ. ಇಲ್ಲೆಲ್ಲ ಬಳಕೆಯಾದ ಛಂದೋವೃತ್ತಗಳು ತಾಳ, ಲಯ, ಗೆಜ್ಜೆ, ದಂಡಿಗೆಗಳಿಗೆ ಮೇಳವಾಗಿ ರೂಪಿತವಾದುವು. ಇಲ್ಲೆಲ್ಲ ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಸುವ್ವಾಲಿ, ಶೋಭಾನೆ, ಸುವ್ವಿ, ಉರುಠಣೆ) ಕೋಲುಪದ, ಲಾವಣಿಪದ, ಜೋಗುಳಪದ, ಇತ್ಯಾದಿ ದೇಸೀಯ ಹಾಗೂ ಜಾನಪದ ಮಟ್ಟುಗಳ ಅಧಿಕ್ಯ ಹೆಚ್ಚು. ಒಟ್ಟಾರೆ ಅವರ ಕೃತಿಗಳಲ್ಲಿ

ಪಲ್ಲ, ಅನುಪಲ್ಲ, ನುಡಿಗಳ ಕ್ರಮ; ಪಲ್ಲ, ಅನುಪಲ್ಲ, ಶ್ಲೋಕ ಪದಗಳ ಕ್ರಮವೂ–ಎದ್ದು ಕಾಣುತ್ತದೆ. ವಿಶೇಷತಃ ಉಗಾಭೋಗ ಸುಳಾದಿ, ಕೀರ್ತನೆಗಳು ವಿಶಿಷ್ಟ ಪೂರ್ಣವಾಗಿವೆಯೆಂದು ಹೇಳಬಹುದು.

ಉಗಾಭೋಗವೆಂದರೆ ಉದ್ಗ್ರಾಹ + ಆಭೋಗ. ಇದು ಸ್ವರ ಪ್ರಧಾನಗೀತ. ಉದ್ಗಾಹ, ಮೇಲಾಪ, ಧ್ರುವ, ಅಂತರ, ಆ ಭೋಗ – ಇವು ಐದು ರಾಗಗೀತದ ಅವಯವಗಳು. ಉಗಾಭೋಗಕ್ಕೆ ಒಂದು ಮಾದರಿ:

"ಜಾಲಿಸಬೇಕು ಜಾಲಿಸಬೇಕು ಜಾಲಿಸಬೇಕು । ಜಾಲಗಾರನಾಗಿ
ಜಾಲ ಪಾಪಂಗಳು ಕಸ ಪೋಗುವಂತೆ ಜಾಲಿಸಬೇಕು
ಜಾಲಿಸಿ ಒಳ್ಳೆ ವಸ್ತ ಸಂಪಾದಿಸಿ
ಜಾಳಿಗೆ ಚೆನ್ನಾಗಿ ತುಂಬಲು ಮಾಯಾ
ಜಾಲ ವಿಜಯವಿಠಲನ ಸನ್ನಿಧಿಯಲ್ಲಿ
ಜಾಳಿಗೆಯಿಟ್ಟು ಜನನ ನೀಗಬೇಕು".

ಸುಳಾದಿಯೆಂದರೆ ಸೂಡಾಲಿ, ವಾದ್ಯ ನರ್ತನಗಳಿಗೆ ಉಪಯುಕ್ತವಾದದ್ದು. ಧ್ರುವ, ಮಟ್ಟ, ರೂಪಕ, ಝಂಪ, ತ್ರಿಪುಟ, ಅಟ್ಟ, ಏಕತಾಳ–ಸಾಮಾನ್ಯವಾಗಿ ಈ ಸಪ್ತತಾಳಗಳಿಗೆ ಏಳು ನುಡಿಗಳಿದ್ದು ಕೊನೆಯಲ್ಲಿ ಜತೆ, ಜತ್ತೆ ಅರ್ಥಾತ್ ಜೊತೆ ಇರುತ್ತದೆ. ಕೆಲವೆಡೆ ಐದು ನುಡಿಗಳೂ ಇರುತ್ತವೆ. ಕೀರ್ತನೆಗಳ ಆರಂಭದಲ್ಲಿ ಪಲ್ಲವಿ ಇರುವಂತೆ ಸುಳಾದಿಗಳ ಕೊನೆಯಲ್ಲಿ ಇರುವ ಜತೆ. ಎರಡು ಸಾಲುಗಳುಳ್ಳದ್ದು. ಅದು ಸುಳಾದಿಯ ಆಶಯವನ್ನು ಅಥವಾ ಸಾರಾಂಶವನ್ನು ಹೇಳುತ್ತದೆ. ಒಟ್ಟಾರೆ ಇದು ಲಯ ಪ್ರಧಾನಗೀತೆ. ಸಾಮಾನ್ಯವಾಗಿ ಎಲ್ಲ ದಾಸರು ಸುಳಾದಿಗಳ ಮೇಲೆ ಕೈಯಾಡಿಸಿದ್ದರೂ ವಿಜಯದಾಸರಿಗೆ ಸುಳಾದಿಯ ದಾಸರೆಂದೇ ಖ್ಯಾತಿ.

ಸುಳಾದಿಗೆ ಒಂದು ಉದಾಹರಣೆ.

ಧ್ರುವತಾಳ:
"ಹುಟ್ಟುವ ಭೀತಿ ಹೊಂದುವ ಭೀತಿ ವಿಠ್ಠಲನಂಘ್ರಿಯ ನೆನೆಯದವಗೆ
ಕಾಲನಭೀತಿ ಕರ್ಮದ ಭೀತಿ ಗೋಪಾಲನ ದಾಸನಾಗದವಗೆ
ಅರಿಷಡ್ವರ್ಗದ ಮಹಾಭೀತಿ ಹರಿನಾಮ ಉಚ್ಚರಿಸದವಗೆ
ಹಲವು ಮಾತಿನಲೇನು ಹಲವು ಭೀತಿ ನಮ್ಮ ಪುರಂದರ ವಿಠಲನ
ಪೂಜಿಸದವಗೆ ॥೧॥
ಮಟ್ಟತಾಳ:
ನಿನ್ನ ದಿವ್ಯನಾಮ ಸುಧಾಂಬುಧಿಯಲ್ಲಿ
ಮನ ಮುಳುಗಿಪ್ಪ ಮಹಾಮಹಂತರ
ನಿನ್ನ ದಿವ್ಯ ಚಿನ್ಮಾತ್ರ ಮೂರುತಿಯ
ಅನುಭವಿಸುವಾನಂದ ಭರಿತರ

ಅನುದಿನವು ಅವರೊಳಿರಿಸೆನ್ನ
ಘನಮಹಿಮ ಶ್ರೀ ಪುರಂದರ ವಿಠ್ಠಲ ವಿಭುವೆ ॥೨॥
ತ್ರಿಪುಟ ತಾಳ:
ನೀಲ ಘನಶ್ಯಾಮ ಕೋಮಲಾಂಗನ ಕಂಡು
ಅವ್ವಾ ಅವ್ವಾ ಎಂತು ನಿಲ್ಲಬಹುದೆ:

ಇನ್ನೆಂತು ಸೈರಿಪೆನೆ ಆರಾದಡೆ ಏನಾದಡೆ
ಎನ್ನ ಚಿನ್ನನು ಪುರಂದರ ವಿಠಲ ಆತನನಪ್ಪಿದೆನವ್ವಾ : ೩ :
ಅಟ್ಟತಾಳ:
ಮಂಗಳಮಯ ವಿಷ್ಣು ವಾಮನ
ಗಂಗಾಪಿತ ಹರಿಯೆ ಎನಲೆನ್ನು
ಕಂಗಳಲ್ಲಿ ಜಲವು ಉಕ್ಕುವುದು:
ಅಂಗ ಪುಳಕಾಂಗವೆಂದಪ್ಪುದು – ಎನ್ನ
ಕಂಗಳಲ್ಲಿ ಜಲವೆಂದು ಉಕ್ಕುವುದು ?
ಪುರಂದರ ವಿಠಲನಂಘ್ರಿಭಜಕನೆಂದು
ಕಂಗಳಲ್ಲಿ ಜಲವೆಂದು ಉಕ್ಕುವುದು? : ೪ :
ಆದಿತಾಳ:
ಮಂದರಧರನ ಮೊರೆಹೊಕ್ಕು ಬದುಕುವೆನು
ಇಂದು ನಾಳೆ ನಾಡಿದ್ದೆಂಬ
ಮಂದಮತಿಗಿನ್ನೇನೆಂಬೆ?
ಹಿಂದೆ ಮುಂದೆ ಬಪ್ಪ ಮೃತ್ಯುವಿಚಾರಿಸದೆ:
ತಂದು ತಂದು ಕೆಡಹುತಲಿದೆ ಭವಾಂಬುಧಿಯಲ್ಲಿ
ತುದೆನಿಂದು ಪರಿಯಂತ ಈ ಬೆಂದ ಮನದೀಪ್ತಿಯ : ೫ :
ಜತೆ:
ಮಾರಮಣ ಭೂರಮಣ ಪುರಂದರವಿಠ್ಠಲ
ಸಾರ್ವಭೌಮ ರಮಾರಮಣ

ಕೀರ್ತನೆಗಳು ಅಥವಾ ಪದಗಳೆಂದರೆ ಅದರಲ್ಲಿ ಆತ್ಮನಿವೇದನೆ, ಸ್ತೋತ್ರ, ಉಪದೇಶ, ತತ್ತ್ವ ಅನುಭವ ಇತ್ಯಾದಿ ವಿಷಯ ವೈವಿಧ್ಯಗಳು ಸಮಾವೇಶಗೊಳ್ಳುತ್ತವೆಯೆಂದು ಈ ಮೊದಲು ಸೂಚಿಸಲಾಗಿದೆ. ಇದರಲ್ಲಿ ಜಾನಪದ ಜಾಡಿನ ಎಲ್ಲ ಛಂದೋ ವೈವಿಧ್ಯಗಳನ್ನು ಹೃದ್ಯವಾಗಿ ಕಾಣಬಹುದಾಗಿದೆ. ಇಲ್ಲೆಲ್ಲ ಪಲ್ಲವಿ, ಅನುಪಲ್ಲವಿ, ಚರಣ ಇಲ್ಲವೆ ಪಲ್ಲವಿ ಚರಣಗಳು ಇದ್ದು ಭಕ್ತಿ ಭಾವವು ಸಂಗೀತ ಸಾಹಚರ್ಯೆಯಲ್ಲಿ ಸಾಕ್ಷಾತ್ಕಾರದ ಅನುಸಂಧಾನಕ್ಕೆ ಅನುವು ಮಾಡಿಕೊಡುತ್ತದೆ.

ಉದಾಹರಣೆಗೆ ಒಂದು ಕೀರ್ತನೆ:
ತನು ನಿನ್ನದು ಜೀವನ ನಿನ್ನದು ರಂಗ : ಪ :

ಅನುದಿನದಲಿ ಬಾಹೂ ಸುಖದುಃಖ ನಿನ್ನದಯ್ಯ : ಅ. ಪ :
ಸವಿನುಡಿ ವೇದ ಪುರಾಣ ಶಾಸ್ತ್ರಂಗಳು
ಕಿವಿಯಿಂದ ಕೇಳುವ ಕಥೆ ನಿನ್ನದು
ನವ ಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ : ೧ :
ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳು
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಅರುಚಿ ನಿನ್ನದಯ್ಯ : ೨ :
ಮಾಯಾಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯ ಪಂಚೇಂದ್ರಿಯಗಳು ನಿನ್ನವು
ಮಾಯಾರಹಿತ ಕಾಗಿನೆಲೆಯಾದಿ ಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೋ : ೩ :

ದಾಸರು ತಮ್ಮ ಕೀರ್ತನೆಗಳಲ್ಲಿ ಭಾಮಿನೀ, ವಾರ್ಧಕ, ಶರ ಷಟ್ಪದಿಗಳನ್ನೂ, ತ್ರಿಪದಿಯನ್ನೂ, ರಗಳೆಯನ್ನೂ ವಿಶೇಷವಾಗಿ ಬಳಸಿದ್ದಾರೆ. ಈ ಪ್ರಭಾವವನ್ನು ಮುಂದಿನ ಶತಮ್ಮಾನಗಳಲ್ಲಿ ಹೆಚ್ಚು ನಿಚ್ಚಳವಾಗಿ ಕಾಣುತ್ತೇವೆ. ಇಲ್ಲಿ ವಿಷಯ ನಿರೂಪಣೆಯ ವ್ಯಾಪ್ತಿ ಜನ ಮೆಚ್ಚುಗೆಯನ್ನು ಪಡೆದುದರಿಂದ ಈ ಛಂದಸ್ಸುಗಳ ವ್ಯಾಪ್ತಿ ಕೀರ್ತನೆಗಳಿಗಷ್ಟೇ ಉಳಿಯದೆ, ಮಹಾಕಾವ್ಯಗಳೂ, ದಾಸರು ಬಳಸಿದ ಒಂದೊಂದು ಛಂದೋರೂಪಗಳನ್ನು ಬಳಸಿಕೊಂಡು ವರ್ಣಕಗಳು ಹೊರಬಂದುವು. ಸಾಳ್ವಭಾರತ, ಲಕ್ಷ್ಮೀಶನ ಜೈಮಿನಿಭಾರತ, ರತ್ನಾಕರ ವರ್ಣಿಯ ಭರತೇಶ ವೈಭವ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯ, ಗೋಪಕವಿಯ ನಂದಿಮಹಾತ್ಮ್ಯ, ಚಿತ್ರಭಾರತಗಳು, ರಂಗನಾಥನ ಅನುಭವಾಮೃತ, ಹೊನ್ನಮ್ಮನ ಹದಿಬದೆಯ ಧರ್ಮ, ಮುದ್ದಣನ ಶ್ರೀರಾಮಪಟ್ಟಾಭಿಷೇಕ–ಹೀಗೆ ಇವುಗಳು ದೇಸೀಯ ಛಂದಸ್ಸನ್ನು ಬಳಸಿಕೊಂಡು ಚಿರಂಜೀವಿಯಾಗಿರುವ ಕವಿ-ಕಾವ್ಯಗಳೆಂದು ಇಲ್ಲಿ ನೆನಪಿಸಿಕೊಳ್ಳಬೇಕು. ಈ ಮೊದಲು, ವಚನಕಾರರು, ಹರಿಹರರಾಘವಾಂಕ ಮೊದಲಾದವರು ಈ ಷಟ್ಪದಿ ಮೊದಲಾದ ದೇಸೀ ಛಂದಸ್ಸುಗಳ ಬಳಕೆಗೆ ಚಾಲನೆಯನ್ನು ಕೊಟ್ಟಿದ್ದರೆಂಬುದನ್ನೂ ಇಲ್ಲಿ ಮರೆಯಕೂಡದು. ಆದರೆ ಹೆಚ್ಚು ವಿಸ್ತಾರವಾಗಿ ದೇಸೀಯ ಪ್ರಚುರತೆಗೆ ದಾಸರು ತಮ್ಮ ಸೇವೆಯನ್ನು ಗುಡಿಸಿಲು ಗುಡಿಸಿಲಿಗೂ ಮುಟ್ಟಸಿ ಕೃತಾರ್ಥರಾಗಿದ್ದಾರೆ. ಆ ಸೊಗಸು ಹೊಸಗನ್ನಡ ಕವಿತೆಗಳಲ್ಲಿಯೂ ನವ ಚೈತನ್ಯದಿಂದ ಇಂದಿಗೂ ತನ್ನ ತನವನ್ನು ಮೆರೆಸಿ ದಾಂಗುಡಿಯಿಡುತ್ತ ನಡೆದಿದೆ. ಹೊರ ನೋಟಕ್ಕೆ ಅದು ತೀರ ಹೊಸದೆನಿಸಿದರೂ ಅಂತರ್ಯವೆಲ್ಲ ಅದೇ ಸತ್ತ್ವದ್ದು. ಮಾನವ ಜನ್ಮದ ಸಾರ್ಥಕತೆಯನ್ನು ಕುರಿತೇ ಹಾಡಿದ್ದು. ಹೊಸ ಕವಿತೆಗಳಲ್ಲಿ ಪಲ್ಲವಿಗಳಿರಲಿಕ್ಕಿಲ್ಲ. ಪ್ರಾಸವಿರಲಿಕ್ಕಿಲ್ಲ. ಆದರೆ ಲಯ, ಮರ್ಮ, ನಿವೇದನೆ ಯಾವ ಕಾಲಕ್ಕೂ ಅದೇ ಬದುಕಿನ ಒಳಿತಿಗಾಗಿ ಒಡಮೂಡಿದೆ. ಅದೇ ದಿಂಡಿಮವನ್ನೆ

ಹೊಸಗನ್ನಡ ಕವಿತೆಗಳ ಜಾಡಿನಲ್ಲಿಯ ಸ್ಫೂರ್ತಿಯಲ್ಲಿ ಕಾಣುತ್ತೇವೆ. ಇದನ್ನೇ ದಾಸಸಾಹಿತ್ಯದ ಅಚ್ಚಳಿಯದ ಸೇವಾ ಪ್ರಭಾವವೆಂದರೆ ಅಪಚಾರ ಮಾಡಿದಂತೇನೂ ಆಗುವುದಿಲ್ಲ. ಪರ್ಯಾಯವಾಗಿ ಕೃತಜ್ಞತೆಗಳನ್ನು ಸಲ್ಲಿಸಿದಂತಾಗುತ್ತದೆ.

ಒಂದು ಅರ್ಥದಲ್ಲಿ ಹರಿದಾಸರ ಕೀರ್ತನೆಗಳು ಭಾವಗೀತೆಗಳೇ ಸೈ. ಹಾಗಾದರೆ 'ಭಾವಗೀತೆ' ಎಂದರೇನು?

"ಕವಿ ತನ್ನ ವ್ಯಕ್ತಿತ್ವದ ಪ್ರಭಾವವನ್ನು ಅತ್ಯಂತ ಸ್ಪಷ್ಟವಾಗಿ ಅಚ್ಚಳಿಯದಂತೆ ಮುದ್ರೆಯೊತ್ತುವುದು ಭಾವನಿಷ್ಠ ಕಾವ್ಯದ ಶ್ರೇಷ್ಠ ನಿದರ್ಶನ ಅಥವಾ ಏಕೈಕದರ್ಶನವೇ ಭಾವಗೀತೆ".

"ಭಾವಗೀತಕಾರನಿಗೆ ಈ ಬಾಹ್ಯವಸ್ತು ಕೇವಲ ನಿಮಿತ್ತ ಮಾತ್ರಕ್ಕಾದರೂ ಇದ್ದೇ ತೀರಬೇಕೆಂಬ ನಿಯಮವಿಲ್ಲ."

"ಭಾವಗೀತೆಯ ವಸ್ತು ಕವಿಯ ಅಂತರಂಗದ ವಸ್ತು".

ವ್ಯಾಖ್ಯೆ ಹೇಗಿದ್ದರೂ ಭಾವಕ್ಕೆ ಒಂದು ಸರಿಯಾದ ರೂಪ ಕೊಡಲು ಬುದ್ಧಿಬೇಕು. ಬುದ್ಧಿಗೆ ಸಹಕಾರ ಐಕ್ಯತೆ ಅದೀರ್ಘತೆ ಬೇಕು. ಅದಕ್ಕಾಗಿ ತನ್ನ ಕೆಲವೇ ಸಾಲುಗಳಲ್ಲಿ ಅನಂತತೆಯನ್ನು ಹಿಡಿದಿಡುವ ಪ್ರಯತ್ನವನ್ನೇ ಅದು ಮಾಡುತ್ತದೆ. ಅಂತೆಯೇ, "ಅನಂತ ಸಂಪತ್ತನ್ನು ಪರಿಪೂರ್ಣ ಸೌಂದರ್ಯವನ್ನು ಪುಟ್ಟ ಕೋಣೆಯೊಂದರಲ್ಲಿ ಹಿಡಿದಿಡುವ ಹಂಬಲದ ನೈರಂತರ್ಯವನ್ನು" ಈ ಭಾವಗೀತೆಯ ಕಾವ್ಯರೂಪ ಪ್ರದರ್ಶಿಸುತ್ತದೆ' ಎಂದು ಆಲ್ಡನ್ (alden) ಅವರು ತಮ್ಮ An introduction to poetry ಪುಸ್ತಕದಲ್ಲಿ ಬರೆದದ್ದು ಸಮಂಜಸವೆನ್ನಿಸುತ್ತದೆ.

ಈ ಭಾವಗೀತೆಯ ಲಕ್ಷಣಗಳನ್ನು ಕನ್ನಡ ಸಾಹಿತ್ಯದಲ್ಲಿ, ಶಾಸನಗಳಲ್ಲಿಯೂ, ಚಂಪೂ ಕಾವ್ಯಗಳಲ್ಲಿಯೂ ವಚನಗಳಲ್ಲಿಯೂ ಕಾಣುತ್ತೇವೆ. ವಚನಗಳಲ್ಲಿ ಬಿಡಿಯಾಗಿಯೂ ಇಡಿಯಾಗಿಯೂ ಕಂಡರೆ, ಚಂಪೂ ಕಾವ್ಯಗಳಲ್ಲಿ ಮೂಲಕಥೆಯ ಶೈಲಿಯೊಡನೆ ಹಾಸು ಹೊಕ್ಕಾಗಿರುವುದನ್ನು ಬಿಡಿಸಿ ನೋಡಬೇಕಾಗುತ್ತದೆ. ಆದರೆ ಕೀರ್ತನೆಗಳಲ್ಲಿ ಮಾತ್ರ ಭಾವಗೀತೆಯ ಲಕ್ಷಣಗಳು ಹೆಚ್ಚು ನಿಚ್ಚಳವಾಗಿ ಕಂಡು ನವೋದಯ ನವ್ಯ ಕಾವ್ಯಗಳಲ್ಲಿ ಅವು ತಮ್ಮ ಪ್ರಭಾವವನ್ನು ಬೀರುತ್ತ ಉತ್ತಮ ಭಾವಗೀತೆಗಳಿಗೆ ಹೊಸಧೋರಣೆ ಪ್ರೇರಣೆಗಳಾಗಿವೆ. ಸಾಮಾನ್ಯವಾಗಿ ಕೀರ್ತನೆಗಳಲ್ಲಿ ಹರಿದಾಸರು, ತಮ್ಮ ಹೃದಯದ ನಾನಾ ತುಮುಲಗಳನ್ನು, ಭಗವಂತನ ವಿರಹದಿಂದಾದ ಅಸಹನೀಯ ವೇದನೆಯನ್ನು, ಅಧ್ಯಾತ್ಮಪಥದ ಅಸಂಖ್ಯಾತ ಅಡ್ಡಿ ಆತಂಕಗಳೊಡನೆ ತಾವು ನಡೆಸಿದ ಹೋರಾಟಗಳನ್ನು ಆಮೂಲಕ ಭಗವಂತನ ದರ್ಶನಜನ್ಯವಾದ ಆನಂದವನ್ನು ಕಾವ್ಯಮಯವಾಗಿ ವರ್ಣಿಸಿದ್ದಾರೆ. ಅಲ್ಲಿ ಸಾಮಯಿಕವಾದ ಸಮಾಜವಿಮರ್ಶೆ, ಅಂತರಂಗ ವಿಮರ್ಶೆ, ಆತ್ಮನಿವೇದನೆ ಇತ್ಯಾದಿಗಳೂ ಪರಿಣಾಮಕಾರಿಯಾಗಿ ಚಿತ್ರಿತವಾಗಿವೆ. ಹೀಗಾಗಿ ಹೊಸಗನ್ನಡದ ಒಂದು ಕಾವ್ಯ ಪ್ರಬೇಧವಾದ ಭಾವಗೀತೆಯ ಬೆಳೆವಣಿಗೆಗೆ ಹರಿದಾಸ ಸಾಹಿತ್ಯವು ಸಾಕಷ್ಟು ಪ್ರೇರಣೆ ನೀಡಿದೆ.

ಸರ್ವಸ್ವಾರ್ಪಣೆಯನ್ನು ಹಾಡುವ ಕುವೆಂಪು ಅವರ
"ಸೂತ್ರಧಾರಣೆ ನೀನು ಪಾತ್ರಧಾರಿಯು ನಾನು
ಯಾವ ಪಾತ್ರವನಿತ್ತರೇನು ನೀನೆನಗೆ?
ನಿನ್ನ ಅಧ್ಯಕ್ಷತೆಯ ನಿನ್ನ ಈ ನಿನ್ನಲೀಲೆಯಲಿ
ಪರಮ ಪುರುಷಾರ್ಥ ರೂಪಿಣಿ ನೀನೆ ಎನಗೆ" ಎಂಬ

ಪಾದಗಳು, "ತನು ನಿನ್ನದು ಜೀವನ ನಿನ್ನದು ಸ್ವಾಮಿ
ಅನುದಿನದಲಿ ಬಹಸುಖದುಃಖ ನಿನ್ನದಯ್ಯ"
ಎಂಬ ಕನಕದಾಸರ ಕೀರ್ತನೆಯನ್ನು ನೆನಪಿಸುತ್ತದೆ. ಶ್ರೀ ಅಡಿಗರ,
"ಕಲ್ಲಾಗು ಕಲ್ಲಾಗು ಬಾಳ ಬಿರುಗಾಳಿಯಲಿ
ಅಲ್ಲಾಡದೆಯೇ ನಿಲ್ಲು ಜೀವ" ಎಂಬುದು
"ಬಿಲ್ಲಾಗಿರಬೇಕು ಬಲ್ಲವರೊಳು ಕಲ್ಲಾಗಿರಬೇಕು

ಕಠಿಣ ಭರತೆರೆಯೊಳು" ಎಂಬ ಬದುಕುವ ಕಲೆಯನ್ನು ತೋರಿಸುವ ಕೀರ್ತನೆಯನ್ನು ನೆನಪಿಗೆ ತರುತ್ತದೆ.

"ಯಾವ ಮೋಹನ ಮುರಲಿ ಕರೆಯಿತು ದೂರ ತೀರಕೆ ನಿನ್ನನು
ಯಾವ ಬೃಂದಾವನವು ಕರೆಯಿತು ನಿನ್ನ ಮಣ್ಣಿನ ಕಣ್ಣನು"
ಎಂಬ ಅಡಿಗರ ಮತ್ತೊಂದು ಪದ್ಯ ಶ್ರೀಪಾದರಾಯರ,
"ಕೊಂಬು ಕೊಳಲನೂದುತ ನಂಬಿಸಿ ಪೋದನೆಯವ್ವಾ
ಅಂಬುಜನಾಭಗೆ ಮನ ಹಂಬಲಿಸುತ್ತಿದೆಯವ್ವಾ"
"ಮಾತು ಮನಸು ಬಾರದು ಕಾತರಿಸುತಿದೆ ಮನ
ಪ್ರೀತಿವಂತನ ಕಾಣದೆ ನಾ ತಾಳಲಾರೆನವ್ವಾ"
ಎಂಬ ಪಾದಗಳುಳ್ಳ ಕೀರ್ತನೆಯನ್ನು ನೆನಪಿಸುತ್ತದೆ.

ಇದೇ ರೀತಿ ಸಮಾಜವಿಡಂಬನೆ, ಸಾಮಾಜಿಕ ವಾಸ್ತವ ಜೀವನ, ಆತ್ಮ ಪರಿಶೀಲನೆ, ನಿವೇದನೆ, ಮುಂತಾದವೂ ಭಾವಗೀತೆಗಳಲ್ಲಿ ಸಾಮಾನ್ಯವಾಗಿ ಮುಟ್ಟಿದೆಡೆಗಳಲ್ಲೆಲ್ಲ ಹರಿದಾಸರ ಕೀರ್ತನೆಗಳ ಪ್ರೇರಣೆಯ ಕಿರಣಗಳನ್ನು ಗುರುತಿಸಲು ಸಾಧ್ಯವಿದೆ. ಹೀಗೆ ಈ ಶತಮಾನದ ಕೊನೆಯ ಅಂಚಿನಲ್ಲಿಯೂ ಕನ್ನಡ ಕಾವ್ಯ ಪ್ರಪಂಚ, ಊರು ಊರುಗಳಿಗೆ ಬರುವ ದಾಸಯ್ಯನನ್ನು ಕೇರಿಕೇರಿಗೂ ಮನೆ ಮನೆಗೂ ಮನಮನಕ್ಕೂ ಕರೆದು ಅವನಿಂದ ಸ್ಫೂರ್ತಿಯನ್ನು ಪಡೆದು ಪ್ರಭಾವಯುತವಾಗಿ ಬಳೆಯುತ್ತ ಸಾಗಿರುವುದು ದಾಸಸಾಹಿತ್ಯದ ಗಮನಾರ್ಹವಾದ ಪ್ರಭಾವವೆಂದು ಹೇಳಬೇಕು.

ವಚನ ಸಾಹಿತ್ಯವು ಬರುವ ಮುನ್ನ ಕನ್ನಡ ಸಾಹಿತ್ಯವು ಮುಕ್ಕಾಲು ಮೂರುವೀಸೆ ಪಾಲು ಸಂಸ್ಕೃತ ಪ್ರಭಾವಿ ಮಾರ್ಗದಲ್ಲಿಯೇ ನಡೆದು ಬಂತು. ಆದ್ದರಿಂದ ಆ ಕಾಲದ ಸಾಹಿತ್ಯವು ಅರಮನೆಗೆ ಮೀಸಲಾಗಿ ಕೇವಲ ಪಂಡಿತರಿಗೆ ಮನರಂಜನೆಯನ್ನೇ ನೀಡಿತೇನೊ? ಅಲ್ಲಿಯೂ ಕವಿ ಜನರ ಪ್ರತಿನಿಧಿಯಾಗಿ ದೇಸಿಯ ಸೊಲ್ಲಿನ ಧ್ವನಿರಮ್ಯತೆಯನ್ನು

ಸ್ವಾಭಾವಿಕವಾಗಿ ಆಗಾಗ ತಂದಿದ್ದರೂ ಅದರ ಪ್ರಮಾಣ ಅಧಿಕವಾಗಿಲ್ಲ. ಹೀಗಾಗಿ ಆ ಕಾಲದ ಸಾಹಿತ್ಯವು ಸಾಮಾನ್ಯ ಮನುಷ್ಯನ ಅಂತರಂಗದ ಚೇತನವನ್ನು ಬೆಳೆಸಲಿಲ್ಲ. ಆತನ ಜೀವನಕ್ಕೆ ಚೈತನ್ಯ ಬಹು ಕಡಮೆ ಪ್ರಮಾಣದಲ್ಲಿ ದೊರೆಯಿತು. ಅಷ್ಟೇ ಅಲ್ಲ ಕೇವಲ ಅಲಂಕಾರದ ಅಭಿವ್ಯಕ್ತಿಯಲ್ಲಿ ಸಾಹಿತ್ಯದ ಉದ್ದೇಶವಾಗಿರುವ ಆನಂದ ಪ್ರಾಪ್ತಿಯನ್ನು ಲೋಕಕ್ಕೆ ತಂದುಕೊಡುವಲ್ಲಿ ಆಗ ವಿಫಲವಾಯಿತು. ಹೀಗಾಗಿ ಅರ್ಥವಿಲ್ಲದ ಆಚಾರಗಳು ಹೆಚ್ಚಾಗಿ ಕನ್ನಡ ಸಾಹಿತ್ಯದಲ್ಲಿಯೂ ಜನಜೀವನದಲ್ಲಿಯೂ ಕ್ರಾಂತಿ ಬರಬೇಕಾಯಿತು. ಆ ಸಂದರ್ಭದಲ್ಲಿ ಅಲ್ಲಮ ಪ್ರಭು, ಬಸವಣ್ಣನವರು ಆ ದಿಸೆಯಲ್ಲಿ ಹೊಸ ಮಾರ್ಗವನ್ನು ಕನ್ನಡಕ್ಕೆ ನೀಡಿ ಜನವಾಣಿಯಲ್ಲಿ ಅನುಭಾವವನ್ನು ಹಂಚಿ ಕಾಯಕ ಧರ್ಮವನ್ನು ಅನುಷ್ಠಾನಕ್ಕೆ ತಂದರು. ಅದರ ಸತ್ವವನ್ನು ಅರಿತ ಹರಿದಾಸರು ಮುಂದೆ ಅದಕ್ಕೆ ಸಂಗೀತ ಜೋಡಿಸಿ ಜನವಾಣಿಯ ಸತ್ವವನ್ನೆಲ್ಲ ಹರಿದಾಸ ಸಾಹಿತ್ಯದಲ್ಲಿ ಮೇಳಗೊಳಿಸಿ ತಾಳಿ, ತಾಳಕ್ಕೆ ತಕ್ಕ ಮೇಳ ಜೋಡಿಸಿ ಅಪರೂಪವಾದ ಜೀವನ ಮೌಲ್ಯಗಳನ್ನು ಗುಡಿಸಿಲಿಗೂ ಮುಟ್ಟಿಸಿ ಸಮನ್ವಯ ಸ್ಥರದ ಮೇಲೆ ಸಮಾಜವನ್ನು ಕಟ್ಟಿ ನಡೆಸಿದರು. ಈ ಗೆಲುವಿಗೆ ಕಾರಣ ಅವರು ಲೋಕ ಸಾಮಾನ್ಯವಾದ ಭಾಷಾ ಸತ್ವವನ್ನೆಲ್ಲ ತಮ್ಮ ಬೆಳವಣಿಗೆಗೆ, ನಾಡಿನ ಬೆಳವಣಿಗೆಗೆ, ತಮ್ಮ ಸಾಹಿತ್ಯದಲ್ಲಿ ಬಳಸಿಕೊಂಡದ್ದೇ ಆಗಿದೆ.

ಈ ಹಿನ್ನೆಲೆಯಲ್ಲಿ ಹರಿದಾಸ ಸಾಹಿತ್ಯವನ್ನು ಪರಿಗಣಿಸಿದಾಗ, ಹರಿದಾಸರ ಭಾಷೆಯಲ್ಲಿ ಸಂಧಿ, ಸಮಾಸ, ಪದಗಳ ರೂಪ ನಿಷ್ಪತ್ತಿ ಇತ್ಯಾದಿಗಳಲ್ಲಿ ವ್ಯಾಕರಣ ನಿಯಮಗಳ ಅನುಲಕ್ಷ್ಯ ಕಡಮೆ. ಹಾಡಿಗೆ ತಕ್ಕಂತೆ, ರಾಗಾಲಾಪಗಳಿಗೆ ತಕ್ಕಂತೆ ಭಾಷೆಯನ್ನು ದುಡಿಸಬೇಕಾಗುತ್ತದೆ. ಈ ಗುಟ್ಟು ದಾಸರಿಗೆ ಗೊತ್ತಾಗಿ ಜನವಾಣಿಯ ಭಂಡಾರವನ್ನೇ ಸೂರೆಗೊಂಡರು. ಇದರಿಂದ ಅಸಲು ಕನ್ನಡದ ಜನವಾಣಿಯ ಪದಗಳು ಇನ್ನೂ ಜ್ಯೋತಿರ್ಮಯವಾಗಿರುವುದನ್ನು ಇಂದಿನ ಸಾಹಿತ್ಯದಲ್ಲಿಯೂ ಕಾಣುತ್ತೇವೆ. ಇತ್ತೀಚೆಗೆ ಈ ದಶಕದಲ್ಲಿ ಬರುತ್ತಿರುವ ಸಾಹಿತ್ಯದಲ್ಲಿ ಜನವಾಣಿ ಅರ್ಥಾತ್ ಆಡುಭಾಷೆ ಅತ್ಯಂತ ಮಹತ್ವದ ಪಾತ್ರವನ್ನು ವಹಿಸಿದೆಯಲ್ಲವೆ? ಅದನ್ನು ಕಂಡಾಗಲೆಲ್ಲ ಹರಿದಾಸರ ಶಬ್ದಕೋಶದ ಶ್ರೇಷ್ಠ ಜಾಡು ನಮ್ಮ ಮೇಲೆ ಇಂದಿಗೂ ಪ್ರಭಾವವನ್ನು ಬೀರುತ್ತದೆ. ಈ ಭಾಷೆಯಲ್ಲಿ ಬರುವ ರೂಪಕಗಳೂ ಅಷ್ಟೇ ಜನಪ್ರಿಯತೆಯನ್ನು ಗಳಿಸಿ, ಅಂತರಂಗದ ಕವಾಟವನ್ನು ತೆರೆಯುವಲ್ಲಿ ಸಾರ್ಥಕವಾಗಿವೆ. ಈ ವಿವರಕ್ಕೆ ಕೆಲವು ಉಪಯುಕ್ತ ಉದಾಹರಣೆಗಳು:

"ಗೆಜ್ಜೆಯ ಕಟ್ಟಿ ತಪ್ಪೆಜ್ಜೆಯ ನಿಕ್ಕುತ (ಶ್ರೀಪಾದರಾಯ-ಸಂಧಿನಿಯಮ)

"ತೇರನೇರಿ ಬೀದೀಲಿ ಬರುವ" (ಶ್ರೀ ಪಾದರಾಯರು–ಜಾನಪದ ವಿಭಕ್ತಿಪ್ರತ್ಯಯ)

"ಹತ್ತು ಸಾವಿರ ಹೊನ್ನ ತಿಪ್ಪೇಲಿ ಹೂಳಿಟ್ಟು" (ಪುರಂದರದಾಸರು–ಜಾನಪದ ವಿಭಕ್ತಿ ಪ್ರತ್ಯಯ)

"ನಾಲಗ್ಗೆ ಮುರಿದೀತೆ ನೆಗ್ಗಿಲ ಕೊನೆಮುಳ್ಳು" (ಪುರಂದರದಾಸರು – ಜಾನಪದ ವಿಭಕ್ತಿ ಪ್ರತ್ಯಯ)

"ಈ ಪರಿಯ ಸೊಬಗಾವದೇವರಲಿ ಕಾಣೆ" (ಪುರಂದರದಾಸರು–ಕಾರಕ ವಿಭಕ್ತಿ ಪಲ್ಲಟ)

"ಕೊಡುಬ್ಯಾಗ ದಿವ್ಯಮತಿ" (ಪುರಂದರದಾಸರು – ಕಾರಕ ವಿಭಕ್ತಿ ಪಲ್ಲಟ)

"ಕಪ್ಪುಮೇಘಕಾಂತಿಯೊಪ್ಪುವ ತಿಮ್ಮಪ್ಪ" (ಪುರಂದರದಾಸರು – ಅರಿಸಮಾಸ)

"ನಿಂದು ತಲೆಯ ತುರಿಸಿಕೊಳಲು ಹೊತ್ತಿಲ್ಲ" (ಪುರಂದರದಾಸರು – ರೂಢಿ ಮಾತಿನ ಶೈಲಿ)

"ಸಿರಿಹೋದ ಮರುದಿನ ಬಡತನ ಬಂದರೆ ಹುರುಕು ಹತ್ತಿದಂತೆ ಕೆರಕೊಂಬರಯ್ಯ" (ಪುರಂದರದಾಸರು – ಆಡುಮಾತಿನ ಶೈಲಿ)

"ನೀನ್ಯಾಕೋ ನಿನ್ನ ಹಂಗ್ಯಾಕೋ" (ಪುರುಂದರದಾಸರು – ಆಡುಮಾತಿನ ಶೈಲಿ ಕ್ರಿಯಾಪದ))

"ತಲ್ಲಣಿಸದಿರು ಕಂಡ್ಯತಾಳುಮನವೆ" (ಕನಕದಾಸರು – ಕ್ರಿಯಾಪದ)

"ಗುಡು ಗುಡಿಯನು ಸೇದಿನೋಡೋ ಒಡಲೊಳಗಿನ ಕಾಮಕ್ರೋಧವನೀಡ್ಯಾಡೋ (ಪುರಂದರದಾಸರು – ಸಾಮಾಜಿಕ ಮೆಟ್ಟಿಗನುಸರಿಸಿ ರೂಪಕ)

"ದೇವಿ ನಮ್ಮ ದಾಸರು ಬಂದರು

ಬನ್ನೀರೆ ನೋಡಿ ಬನ್ನೀರೆ" (ಕನಕದಾಸರು – ಸಾಮಾಜಿಕ ಮೆಟ್ಟಿಗನುಸರಿಸಿ ರೂಪಕ)

"ಒಳ್ಳೊಳ್ಳೆ ಪದಗಳ ಹನುಮ ಹಾಡ್ಯಾನು, ಚೆಲುವ ಕನಕಪ್ಪ ಕುಣಿದಾನ್ಮ" (ಕನಕದಾಸರು – ಸಾಮಾಜಿಕ ಮೆಟ್ಟಿಗನುಸರಿಸಿ)

ಈ ಕೆಲವು ಉದಾಹರಣೆಗಳನ್ನು ನೋಡಿದರೆ ಆಡು ಭಾಷೆಯ ಶಬ್ದಕೋಶದ ಶ್ರೀಮಂತಿಕೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಇಂದಿನ ಈ ಶತಕದವರೆಗೂ ದಾಸಸಾಹಿತ್ಯವು ಸ್ಫೂರ್ತಿಯಾಗಿದ್ದು ವಿಜ್ಞಾನದ ಭಾಷೆಗೂ ಸಮಂಜಸ ಪದ ಕೋಶವನ್ನು ನೀಡುವ ಶಕ್ತಿಯನ್ನು ಹೊಂದಿದೆ. ನಿದರ್ಶನಕ್ಕೆ ಜಗನ್ನಾಥದಾಸರ ಹರಿಕಥಾಮೃತ ಸಾರವನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅದು ಇಂದಿನ ಜೀವಶಾಸ್ತ್ರಕ್ಕೆ ಸಾಕಷ್ಟು ಅರ್ಥಪೂರ್ಣ ಶಬ್ದಗಳ ಭಂಡಾರವನ್ನು ಒದಗಿಸುವುದರಲ್ಲಿ ಸಂಶಯವಿಲ್ಲ.

ಇದುವರೆಗೆ ಸಮೃದ್ಧಿಯಾಗಿ ಬೆಳೆದ ಕನ್ನಡ ಸಾಹಿತ್ಯದ ಮೇಲೆ ಅದೇ ಸಾಹಿತ್ಯದ ಬಹು ಮುಖ್ಯ ಪ್ರಕಾರವಾಗಿರುವ ದಾಸ ಸಾಹಿತ್ಯದ ಪ್ರಭಾವವನ್ನು ಕುರಿತು ಎರಡು ಮೂರು ವಿಷಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಯಿತು. ಅಂತಹ ಇನ್ನೂ ಸಾಕಷ್ಟು ಪ್ರಮುಖ ವಿಷಯಗಳಿವೆ. ಆದರೆ ಅವುಗಳಲ್ಲಿಯೇ ಬಹು ಪ್ರಮುಖವಾದದ್ದು ಸುಂದರವಾದ ಜೀವನದ ಮೌಲ್ಯಗಳನ್ನು ಗುರುತಿಸಿ ಸರಳವಾದ ಕನ್ನಡದಲ್ಲಿ ಎಲ್ಲರಿಗೂ ತಿಳಿಯುವಂತೆ ಸಾದರಪಡಿಸಿದ್ದು.

ದಾಸ ಸಾಹಿತ್ಯವು ಯಾವ ಮತ, ಜಾತಿಗಳ ಸಂಕುಚಿತ ಪರಿಸರಕ್ಕೆ ಸೀಮಿತವಾದುದಲ್ಲ, ಈ ಭೂಮಿಯ ಮೇಲೆ ಹುಟ್ಟಿ ಬಂದ ಮೇಲೆ ಮಾನವ ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳುವುದಕ್ಕೆ ತನುಮನಧನದಲ್ಲಿ ವಂಚಕನಾದರೆ, ಕಾಕುಮನುಜರ ಸಂಗಮ ಮಾಡಿದರೆ, ಪರಮಾತ್ಮನ ಆಶ್ರಯ ಪಡೆಯದಿದ್ದರೆ, ತಮ್ಮಷ್ಟಕ್ಕೆ ತಾವು ಆಣೆಯಿಟ್ಟುಕೊಳ್ಳಲು ಬೋಧಿಸಿತು. ಅದರಂತೆ ತಮ್ಮಲ್ಲಿ ಸ್ಥಿರ ಮನಸ್ಸು ನೀಡಲು ಪರಮಾತ್ಮನಿಗೆ ಆಣೆಯಿಟ್ಟಿತು. ಭಕ್ತರ ಆಣೆಯು ಪರಮಾತ್ಮನಿಗೆ ಬಲು ಗಡಚು ಎಂಬುದನ್ನು ತೋರಿಸಿಕೊಟ್ಟಿತು. ಹೀನವೃತ್ತಿಯಲ್ಲಿ ಬಿದ್ದು ಕೆಡದಂತೆ, ದಾನಧರ್ಮವ ಮಾಡಿ ಸುಖಿಯಾಗುವಂತೆ ಪ್ರಸಾರ ಮಾಡಿತು. ಈಸಬೇಕು, ಇದ್ದು, ಜೈಸಬೇಕೆಂದು ಸಾರಿ, ಮನುಷ್ಯನು ಪ್ರಯತ್ನವಾದಿಯಾಗಿರಬೇಕೆಂದು ಸಾರಿ ಆತ್ಮವಿಶ್ವಾಸ ಮೂಡಿಸಿ ಅದುವರೆಗೆ, 'ಆರೇನು ಮಾಡುವರು ಅರಿಂದಲೇನಹುದು' ಎಂದು ಹೇಳುವ ಸೋಮಾರಿಧರ್ಮದ ದೈವವಾದಿಗಳನ್ನು ಖಂಡಿಸಿ ಮಂಗಳಾರತಿ ಮಾಡಿತು. ಅದರಿಂದ ದೊಡ್ಡದೊಂದು ಅಪವಾದ, ಭಾರತೀಯ ತತ್ತ್ವವಾದಕ್ಕೆ, ಅಧ್ಯಾತ್ಮವಾದಕ್ಕೆ ಬಂದದ್ದು ದೂರವಾಯಿತು. ವಿಶೇಷವಾಗಿ ದಾಸ ಸಾಹಿತ್ಯವು ಪಾಮರರ ಉದ್ಧಾರಕ್ಕಾಗಿ ಮೂಡಿ ಬಂದ ಸಾಹಿತ್ಯಗಳಲ್ಲಿ ಗಣನೀಯವಾದದ್ದು, ಅಂತೆಯೇ ಲೋಕವಾಣಿಯಲ್ಲಿ ಆ ಸಾಹಿತ್ಯವು ಮತ ಸಹಿಷ್ಣುತೆಯನ್ನು ಪರಮತ ಗೌರವವನ್ನು ಕಾಪಾಡಿಕೊಂಡು ಬಂದಿರುವುದಲ್ಲದೆ, ಮಾನವ ಕುಲವೆಲ್ಲವೂ ಒಂದೇ ಎಂದು ಸಾರಿ,

"ಕುಲ ಕುಲ ಕುಲವೆನ್ನುತಿಹರು

ಕುಲ ಯಾವುದು ಸತ್ಯಸುಖವುಳ್ಳ ಜನರಿಗೆ"

ಎಂದು ಮರು ಪ್ರಶ್ನೆಯನ್ನು ಹಾಕಿ ಸತ್ಯದರ್ಶನವನ್ನು ಮಾಡಿ ಕೊಟ್ಟಿತು. ಅಂತೆಯೇ ಅರ್ಥಪೂರ್ಣವಾದ, ಸಹಜ ಬದುಕಿನ ಮಂದಾರವಾದ ದ್ವೈತ ಸಿದ್ಧಾಂತದ ಸೂಕ್ಷ್ಮಾತಿ ಸೂಕ್ಷ್ಮವಾದ ಪ್ರಮೇಯಗಳನ್ನು ಬಿಡಿಸಿ ಬೇರೆ ಬೇರೆ ತತ್ತ್ವಪ್ರಣಾಳಿಕೆಯ ಜನರನ್ನು ತನ್ನೆಡೆಗೆ ಆಕರ್ಷಿಸಿಕೊಂಡು ದಾಸಧರ್ಮದ ಸಹಜ ವಿನಯವನ್ನು ತೋರಿಸಿತು. ಈ ಎಲ್ಲ ವಿಷಯಗಳಿಂದ ದಾಸ ಸಾಹಿತ್ಯದ ಪ್ರಭಾವವು ಕನ್ನಡ ಸಾಹಿತ್ಯದ ಮೂಲಕ ವಿಶ್ವ ಸಾಹಿತ್ಯದ ಮೇಲೆ ವಿಶಿಷ್ಟವಾಗಿ ಚಿರಂತನವಾಗಿ ಇರುವುದೇ ಆಗಿದೆ. ಆ ವೀರಯೋಗವನ್ನು ವಿಜಯದಾಸರು ಮೋಹನದಾಸರಿಗೆ ಉಪದೇಶ ಮಾಡಿದ ಸಂಜೀವಿನಿ ಮಂತ್ರದ ಸಾಧನೆಯಿಂದ ತಿಳಿಯಬಹುದಾಗಿದೆ. ಅದು ನಿತ್ಯ ನೂತನವಾಗಿರುವುದರಿಂದ ಅದನ್ನಿಲ್ಲಿ ಉಲ್ಲೇಖಿಸುವುದು ಒಳಿತು :

"ಚಿರಂಜೀವಿಯಾಗೆಲವೊ ಚಿಣ್ಣ ನೀನು
ಹರಿದಾಸ ದಾಸರ ಪಾದಧೂಳಾಗಿ ॥ ಪ್ರ ॥
ಜರಿಯಬೇಡ ಹರಿಯ ಮರೆಯಬೇಡೆಂದೆಂದು
ತಿರಿಯ ಬೇಡ ಖಳರ ಮನೆಗೆ ಪೋಗಿ :
ಒರೆಯ ಬೇಡನ್ಯರಿಗೆ ರಹಸ್ಯ ತತ್ತ್ವಗಳನ್ನು
ಬೆರೆಯಬೇಡನ್ಯ ಸತಿಯರ ಸ್ವಪ್ನದಲ್ಲೂ ॥೧॥

ಸಾಲ ಮಾಡಲಿ ಬೇಡ ಸಾಲದೆಂದೆನ ಬೇಡ
ನಾಳೆಗೇ ಹೇಗೆಂಬ ಚಿಂತೆ ಬೇಡ
ಖೂಳಜನರೊಡನೆ ಮಿತ್ರತ್ವ ಮಾಡಲಿ ಬೇಡ
ಬಾಳುವರ ಸಂಗದಲಿ ಬಾಳೆಲವೊ ಬಾಲ ॥ ೨ ॥
ಲೋಕ ವಾರ್ತೆಯ ನಿನ್ನ ಕಿವಿಗೆ ಕೇಳಿಸಬೇಡ
ಕೇಳದಿರಬೇಡ ಶ್ರೀಕಾಂತನವಾರ್ತೆ
ಪಾಕವನು ಮಾಡಿ ಏಕಾಂಗಿಯಾಗುಣಬೇಡ
ಲೌಕೀಕವನುಸರಿಸಿ ದಣುಕೊಳಲಿ ಬೇಡ ॥ ೩ ॥
ಪಂಡಿತರು ಪಾಮರರು ಆರಿಗಾದರೂ
ನಿನ್ನ ಕಂಡವರಿಗೆಲ್ಲ ಕೌತುಕವ ತೋರಲಿ
ಹೆಂಡಿರು ಮಕ್ಕಳು ಅಳಿಯ ಸೊಸೆ ಮೊಮ್ಮಕ್ಕಳು
ಉಂಡುಟ್ಟು ದ್ವಿಜರು ಸಹ ಗಂಡುಗಲಿಯಾಗಿರೆಲೋ ॥೪॥
ಮಂದ ಮತಿಗಳಕೂಡೆ ಮಾತಾಡದಿರು ಹರಿ
ನಿಂದಕರ ಕಣ್ಣೆತ್ತಿ ನೋಡಬೇಡ
ಇಂದಿರಾರಮಣ ಸಿರಿ ವಿಜಯ ವಿಠಲನ ಚರಣ
ದ್ವಂದ್ವದಲಿ ಮಸ್ತಕವ ನಿಡದಿರಲಿ ಬೇಡ ॥೫॥

ಈ ವೀರಯೋಗದ ಸಂಜೀವಿನಿಯ ಪ್ರಭಾವವು ಜನರ ಸಮೀಪಕ್ಕೆ ಮುಟ್ಟಿದೆ. ಅಂತೆಯೇ ಜನರು ಅದರ ಸಮೀಪಕ್ಕೆ ಇನ್ನೂ ಬಂದು ಸಂಸ್ಕೃತಿ ಸಂವರ್ಧನ ಕಾರ್ಯದಲ್ಲಿ ಸ್ಫೂರ್ತಿಯನ್ನು ಪಡೆದು ಶ್ರೀ ಸಾಮಾನ್ಯನು ಪ್ರಜಾಪ್ರಭುತ್ವವನ್ನು ಸ್ಥಾಪಿಸುವಂತೆ ಆಗಿರುವುದಷ್ಟೇ ಅಲ್ಲದೆ ಚೇತೋಹಾರಿಯಾದ ಜೀವನಕ್ಕೆ ಚೇತೋಹಾರಿಯಾದ ಸಾಹಿತ್ಯವನ್ನು ನೀಡಿ ಪೋಷಕವಾಗಿ ನಡೆಸಿಕೊಂಡು ಬರುವಲ್ಲಿ ಎಂದೆಂದಿಗೂ ಪ್ರೇರಣಾತ್ಮಕವಾಗಿ ಈ ದಾಸ ಸಾಹಿತ್ಯವು ಅಖಂಡವಾಗಿ ನಿಂತಿದೆ.

# ಡಿ. ಎಲ್. ಎನ್. ಅವರ ಕೃತಿಗಳು

ಡಾ. ವಿಜಯಶ್ರೀ ಸಬರದ

## ಜೀವನ

ಸಾಹಿತ್ಯ ವಲಯದಲ್ಲಿ ಡಿ. ಎಲ್. ಎನ್. ಎಂದೇ ಪ್ರಖ್ಯಾತರಾಗಿದ್ದ ಡಿ. ಎಲ್. ನರಸಿಂಹಾಚಾರ್ ೨೭-೧೦-೧೯೦೬ ರಂದು ಜನಿಸಿದರು. ಇವರ ಪೂರ್ಣ ಹೆಸರು ದೊಡ್ಡ ಬೆಲೆ ಲಕ್ಷ್ಮೀನರಸಿಂಹಾಚಾರ್ ಎಂಬುದಾಗಿದೆ. ಇವರ ಪೂರ್ವಿಕರ ಊರಿನ ಹೆಸರು ದೊಡ್ಡಬೆಲೆ. ಡಿ. ಎಲ್. ಎನ್. ಆ ಊರನ್ನೇ ನೋಡಿದವರಲ್ಲ. ಅವರ ತಂದೆ ಶಾಮಯ್ಯಂಗಾರ್ ಬಹಳ ಹಿಂದೆಯೇ ತಮ್ಮ ಊರಾದ ದೊಡ್ಡಬೆಲೆಯನ್ನು ಬಿಟ್ಟು ಸಬ್‌ರಿಜಿಸ್ಟ್ರಾರ್ ಕಚೇರಿಯಲ್ಲಿ ಗುಮಾಸ್ತೆಯಾಗಿ ಕೆಲಸ ಮಾಡುತ್ತಿದ್ದುದರಿಂದ ವರ್ಗಾವಣೆಯಾಗಿ ಊರಿಂದ ಊರಿಗೆ ಹೋಗುತ್ತಿದ್ದರು. ಆದರೆ ಡಿ. ಎಲ್. ಎನ್. ಅವರು ಹುಟ್ಟಿದ್ದು ತುಮಕೂರಿನ ಸಮೀಪದ ಚಿಕ್ಕನಾಯ್ಕನ ಹಳ್ಳಿಯಲ್ಲಿ, ತಮ್ಮ ತಾಯಿಯ ತಂದೆ ಅಣ್ಣಾಸ್ವಾಮಿ ಅಯ್ಯಂಗಾರರ ಮನೆಯಲ್ಲಿ. ಡಿ. ಎಲ್. ಎನ್. ಅವರ ಪೂರ್ವಿಕರು ಸೇಲಂ ಜಿಲ್ಲೆಯಿಂದ ಬಂದವರು. ಗಂಡಿಕೋಟ ಅವರ ನೆಲೆಯಾಗಿತ್ತು. ವಿಜಯನಗರದ ತಾತಾಚಾರ್ಯರ ಕಾಲದಲ್ಲಿ ಅವರು ಈ ಕಡೆ ವಲಸೆ ಬಂದರು.

ತಂದೆ ಶಾಮಯ್ಯಂಗಾರ್ ಅವರ ವರ್ಗಾವಣೆಯಿಂದಾಗಿ ಡಿ. ಎಲ್. ಎನ್.ಅವರ ವಿದ್ಯಾಭ್ಯಾಸದ ಸ್ಥಾನವೂ ಬದಲಾಗುತ್ತಿತ್ತು. ಪಾವಗಡದಲ್ಲಿ ಅವರು ಮೊಟ್ಟಮೊದಲು ಶಾಲೆ ಸೇರಿದರು. ಮುಂದಿನ ವಿದ್ಯಾಭ್ಯಾಸ ಮಧುಗಿರಿ ಮತ್ತು ಶಿರಾಗಳಲ್ಲಿ ನಡೆಯಿತು. ನರಸಿಂಹಾಚಾರ್ ತಾತಾ ದೊಡ್ಡಬೆಲೆ ಕೃಷ್ಣಮಾಚಾರ್ ಅವರು ಕೂಲಿಮಠದ ಮೇಷ್ಟ್ರಾಗಿ ಒಳ್ಳೆಯ ಹೆಸರುಗಳಿಸಿದ್ದರು. ಇವರು ಕುಮಾರ ವ್ಯಾಸ ಭಾರತವನ್ನು ವಾಚಿಸುತ್ತಿದ್ದರು. ಈ ಪ್ರಭಾವ ಮೊಮ್ಮಗನ ಮೇಲಾಯಿತು. ಹೀಗಾಗಿ ಡಿ. ಎಲ್. ಎನ್. ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿಯೇ ಜೈಮಿನಿಭಾರತದ ಬಹುಭಾಗವನ್ನು ಬಾಯಿಪಾಠ ಮಾಡಿದ್ದರು. ಅವರ ತಂದೆ ತುಮಕೂರಿಗೆ ವರ್ಗವಾಗಿ ಬಂದರು. ಹೀಗಾಗಿ ಅವರ ಮಾಧ್ಯಮಿಕ ಹೈಸ್ಕೂಲು ವಿದ್ಯಾಭ್ಯಾಸ ತುಮಕೂರಿನಲ್ಲಿ ಮುಂದುವರೆಯಿತು. ಹೈಸ್ಕೂಲಿನಲ್ಲಿದ್ದಾಗಲೇ ಅವರು ಲೇಖನ ಬರೆಯಲು ಪ್ರಾರಂಭಿಸಿದರು. ಖಾಸಗಿಯಾಗಿ ಶಾಸ್ತ್ರಿಗಳೊಬ್ಬರಿಂದ ಸಂಸ್ಕೃತ ಕಲಿತು ರಘುವಂಶ ಮುಂತಾದ ಸಂಸ್ಕೃತ ಕೃತಿಗಳನ್ನು ವ್ಯಾಸಂಗ ಮಾಡಿದರು.

ಬಿ. ಎಂ. ಶ್ರೀ ಯವರು ೧೯೨೪ರಲ್ಲಿ ಕಾಲೇಜು ತರಗತಿಗಳ ಇನ್‌ಸ್ಪೆಕ್ಷನ್‌ಗಾಗಿ ತುಮಕೂರಿಗೆ ಹೋಗಿದ್ದರು. ಆ ಸಂದರ್ಭದಲ್ಲಿ ಅವರ ಉಪನ್ಯಾಸವೊಂದನ್ನು ಏರ್ಪಡಿಸಲಾಗಿತ್ತು. ಆಗ ಎಂಟ್ರನ್ಸ್ ಓದುತ್ತಿದ್ದ ಡಿ. ಎಲ್. ಎನ್.ಅವರ ಮೇಲೆ ಶ್ರೀಯವರ ಭಾಷಣ ತುಂಬಾ ಪ್ರಭಾವನ್ನುಂಟು ಮಾಡಿತು. ಎಂಟ್ರನ್ಸ್ ಮುಗಿಸಿ ೧೯೨೪ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜು ಸೇರಿದರು. ೧೯೨೭ರಲ್ಲಿ ಚಿನ್ನದ ಪದಕದೊಂದಿಗೆ ಬಿ. ಎ. ಪದವಿಯನ್ನು ಪಡೆದು ಮೈಸೂರಿಗೆ ಹೋಗಿ ಮಹಾರಾಜಾ

ಕಾಲೇಜಿನಲ್ಲಿ ಅಭ್ಯಸಿಸಿ ೧೯೨೯ರಲ್ಲಿ ಚಿನ್ನದ ಪದಕದೊಂದಿಗೆ ಎಂ. ಎ. ಪದವಿ ಗಳಿಸಿದರು. ಮೈಸೂರು ವಿಶ್ವವಿದ್ಯಾಲಯದಿಂದ ಸಂಶೋಧನಾ ವಿದ್ಯಾರ್ಥಿವೇತನವನ್ನು ಪಡೆದು "ವೀರಶೈವ ಸಾಹಿತ್ಯದ ಉಗಮ' ಎಂಬ ವಿಷಯದ ಮೇಲೆ ಪ್ರಬಂಧ ಬರೆದರು. ಎಂ. ಎ. ವ್ಯಾಸಂಗದ ಸಂದರ್ಭದಲ್ಲಿ ಬಿ. ಎಂ. ಶ್ರೀ, ಟಿ. ಎಸ್. ವೆಂಕಣಯ್ಯ, ಎ. ಆರ್. ಕೃಷ್ಣಶಾಸ್ತ್ರಿಗಳಂತಹ ವಿದ್ವಾಂಸರು ಡಿ. ಎಲ್. ಎನ್. ಅವರಿಗೆ ವಿದ್ಯಾಗುರುಗಳಾಗಿದ್ದರು. ಕುವೆಂಪು, ಎನ್. ಅನಂತರಂಗಾಚಾರ್, ಡಿ. ಕೆ. ಭೀಮಸೇನರಾವ್ ಅವರಂತಹ ಪ್ರತಿಭಾವಂತರು ಇವರ ಸಹಪಾಠಿಗಳಾಗಿದ್ದರು.

ಡಿ. ಎಲ್. ಎನ್. ಅವರು ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನಾ ಸಂಸ್ಥೆಯಲ್ಲಿ ರೆಸಿಡೆಂಟ್ ಕನ್ನಡ ಪಂಡಿತರಾಗಿ ೧೯೩೦ರಲ್ಲಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ಆಗ ಅವರಿಗೆ ತಿಂಗಳಿಗೆ ಎಂಬತ್ತು ರೂಪಾಯಿಗಳ ಸಂಬಳವಿತ್ತು. ಜತೆಗೆ ಮಹಾರಾಜಾ ಕಾಲೇಜಿನಲ್ಲಿ ಪಾರ್ಟ್ ಟೈಮ್ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದರು. ನಂತರ ೧೯೩೨ರಲ್ಲಿ ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕಗೊಂಡರು. ೧೯೪೫ರಲ್ಲಿ ಉಪಪ್ರಾಧ್ಯಾಪಕರಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜು ಸೇರಿದರು. ೧೯೫೫ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ನೇಮಕವಾಗಿ ಬಂದು ೧೯೫೯ರಿಂದ ೬೨ರ ಅವಧಿಯಲ್ಲಿ ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಪಾದಕರಾಗಿದ್ದು ನಂತರ ೧೯೬೨ರಲ್ಲಿ ನಿವೃತ್ತಿ ಹೊಂದಿದರು. ನಿವೃತ್ತಿ ಹೊಂದಿದ ನಂತರ ವಿಶ್ವವಿದ್ಯಾಲಯದ ಧನಸಹಾಯ ಆಯೋಗದ ಸಂಶೋಧನಾ ವಿದ್ವಾಂಸರಾಗಿ ಕೆಲಸ ಮಾಡಿದರು. ನಂತರ ಕನ್ನಡ-ಕನ್ನಡ ನಿಘಂಟಿನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿ ಕೊನೆಯ ದಿನಗಳವರೆಗೂ ಕನ್ನಡ ಕೆಲಸಕ್ಕಾಗಿ ದುಡಿದು ೮-೫-೧೯೭೧ ರಂದು ನಿಧನರಾದರು.

**ಕೃತಿಗಳು**

**I. ಸಂಪಾದಿತ ಕೃತಿಗಳು**

**೧. ಸಕಲ ವೈದ್ಯ ಸಂಹಿತಾ ಸಾರಾರ್ಣವ (೧೯೩೨)**

ಕಳಲೆ ವೀರರಾಜೇಂದ್ರನ ವೈದ್ಯಗ್ರಂಥದ ಮೊದಲ ಭಾಗ ಇದಾಗಿದೆ. ಕ್ರಿ. ಶ. ೧೭೨೦ರಲ್ಲಿ ರಚಿತವಾಗಿದ್ದ ಈ ಕೃತಿಯನ್ನು ಡಿ. ಎಲ್. ಎನ್. ೧೯೩೨ರಲ್ಲಿ ಸಂಪಾದಿಸಿ ಪ್ರಕಟಿಸಿದರು. ಪ್ರಸ್ತಾವನೆಯಲ್ಲಿ ಕವಿ ಕೃತಿಗೆ ಸಂಬಂಧಿಸಿದಂತೆ ವಿವರವಾಗಿ ಚರ್ಚಿಸಲಾಗಿದೆ. ಪ್ರಾರಂಭದ ಸಂಪಾದನೆಯ ಕೃತಿಯಲ್ಲಿಯೇ ಸಂಪಾದನೆಯ ಶ್ರಮ ಹಾಗೂ ಶಿಸ್ತುಗಳನ್ನು ಕಾಣಬಹುದಾಗಿದೆ. ವೈದ್ಯ ಕ್ಷೇತ್ರಕ್ಕೆ ಸಂಬಂಧಿಸಿದ ಮಹತ್ವದ ಈ ಕೃತಿಯನ್ನು ಡಿ. ಎಲ್. ಎನ್. ೧೯೩೨ರಲ್ಲಿಯೇ ಸಂಪಾದಿಸಿ ಪ್ರಕಟವಾಗುವಂತೆ ಮಾಡಿದ್ದು ಗಮನಿಸುವ ಸಂಗತಿಯಾಗುತ್ತದೆ. ಮೈಸೂರಿನ ಪ್ರಾಚ್ಯವಸ್ತು ಸಂಶೋಧನಾಲಯವು ಈ ಕೃತಿಯನ್ನು ಪ್ರಕಟಿಸಿದೆ.

### ೨. ಕರ್ನಾಟಕ ಮಹಾಭಾರತ : ಭೀಷ್ಮಪರ್ವ (೧೯೩೩)

ಕುಮಾರವ್ಯಾಸ ಭಾರತದ ಯುದ್ಧ ಪಂಚದಲ್ಲಿ ಇದು ಮೊದಲನೆಯದಾಗಿದೆ. ೧೯೩೦ ರಲ್ಲಿ ಡಿ. ಎಲ್. ಎನ್. ಅವರು ಟಿ. ಎಸ್. ವೆಂಕಣ್ಣಯ್ಯ ಹಾಗೂ ತೀ. ನಂ. ಶ್ರೀಕಂಠಯ್ಯ ಅವರೊಂದಿಗೆ ಭೀಷ್ಮಪರ್ವದ ಒಂದು ಸಂಗ್ರಹ ಸಿದ್ಧಪಡಿಸಿದ್ದನ್ನಿಲ್ಲಿ ನೆನಪಿಸಿಕೊಳ್ಳಬಹುದಾಗಿದೆ. ಹೊಸ ರೀತಿಯಲ್ಲಿ ಶುದ್ಧ ಪಾಠಗಳೊಂದಿಗೆ ಈ ಕೃತಿಯು ಸಂಪಾದಿತವಾಗಿದೆ. ಪಾಠನಿರ್ಣಯದಲ್ಲಿ ಡಿ. ಎಲ್. ಎನ್. ಅವರ ಶ್ರಮ ಗಮನಿಸುವಂತಿದೆ. ಗ್ರಂಥ ಸಂಪಾದನಾ ತತ್ತ್ವಗಳನ್ನು ಪರಿಪೂರ್ಣವಾಗಿ ಇಲ್ಲಿ ಪಾಲಿಸಲಾಗಿದೆ. ಮೈಸೂರಿನ ಪ್ರಾಚ್ಯವಸ್ತು ಸಂಶೋಧನಾಲಯವು ಈ ಕೃತಿಯನ್ನು ಪ್ರಕಟಿಸಿದೆ.

### ೩. ಪಂಪರಾಮಾಯಣ ಸಂಗ್ರಹ (೧೯೩೬)

ಸುಮಾರು ೧೧೦೦ ರಲ್ಲಿದ್ದ ಜೈನ ಕವಿ ನಾಗಚಂದ್ರನ ಪಂಪರಾಮಾಯಣದ ಸಂಗ್ರಹ ಇದಾಗಿದೆ. ಸಾಮಾನ್ಯವಾಚಕರಿಗಾಗಿ ಹಾಗೂ ವಿದ್ಯಾರ್ಥಿಗಳಿಗಾಗಿ ಇದನ್ನು ಸಿದ್ಧಪಡಿಸಲಾಗಿದೆ. ಪೀಠಿಕೆಯಲ್ಲಿ ಕವಿಯ ಜೀವನ-ಕಾಲ ಹಾಗೂ ಜೈನ ರಾಮಾಯಣಗಳ ಪ್ರಸ್ತಾಪವಿದೆ. ತುಂಬ ಸರಳವಾದ ರೀತಿಯಲ್ಲಿ ಕಾವ್ಯ ವಿಮರ್ಶೆಯನ್ನು ಮಾಡಲಾಗಿದೆ. ನಾಗಚಂದ್ರನ ಬಗೆಗೆ ಈ ಸಂಗ್ರಹ ಓದುಗರಲ್ಲಿ ಹೆಚ್ಚಿನ ಆಸಕ್ತಿಯನ್ನು ಹುಟ್ಟಿಸುತ್ತದೆ. ಮೈಸೂರು ವಿಶ್ವವಿದ್ಯಾಲಯವು ಈ ಕೃತಿಯನ್ನು ಪ್ರಕಟಿಸಿದೆ.

### ೪. ರಾಘವಾಂಕ ಕವಿಯ ಸಿದ್ಧರಾಮಚಾರಿತ್ರ (೧೯೪೧)

ಡಿ. ಎಲ್. ಎನ್. ಅವರು ಪ್ರೊ. ಟಿ. ಎಸ್. ವೆಂಕಣ್ಣಯ್ಯನವರೊಂದಗೆ ಕೂಡಿ ಸಂಪಾದಿಸಿದ ಸಿದ್ಧರಾಮಚಾರಿತ್ರ ಮತ್ತೊಂದು ಮಹತ್ವದ ಕೃತಿ. ಈ ಕೃತಿಗೆ ಅರವತ್ತಾರು ಪುಟಗಳ ದೀರ್ಘವಾದ ಪೀಠಿಕೆಯನ್ನು ಡಿ. ಎಲ್. ಎನ್. ಅವರೇ ಬರೆದಿದ್ದಾರೆ. ರಾಘವಾಂಕ ಕವಿಯ ಜೀವನ ಮತ್ತು ಕಾಲದ ಬಗೆಗೆ ಪೀಠಿಕೆಯ ಪ್ರಾರಂಭದಲ್ಲಿ ಚರ್ಚಿಸಲಾಗಿದೆ. ರಾಘವಾಂಕನ ಕಾಲ ನಿರ್ಣಯದ ಸಂದರ್ಭದಲ್ಲಿ ಹರಿಹರ ಹಾಗೂ ಕೆರೆಯ ಪದ್ಮರಸರಂತಹ ಸಮಕಾಲೀನರ ಕಾಲದ ವಿವರಗಳನ್ನೂ ಪಡೆದುಕೊಂಡು, ಅಂದಿನ ಆಳರಸರಾಗಿದ್ದ ರಾಚಮಲ್ಲ, ಕಲಿದೇವ, ಓರಂಗಲ್ಲಿನ ಕಾಕತೀಯ ರುದ್ರ, ವೀರ ಸೋಮೇಶ್ವರ ಈ ಮೊದಲಾದವರ ಆಳ್ವಿಕೆಯ ಅವಧಿಯನ್ನು ಪರಿಶೀಲಿಸಿ, ಡಾ. ಕಿಟ್ಟೆಲ್, ರಾ. ನರಸಿಂಹಾಚಾರ್, ಕುಂದಣಗಾರ್, ಗೋವಿಂದ ಪೈ ಈ ಮೊದಲಾದ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿ ಚರ್ಚಿಸಿ ಒಂದು ನಿರ್ಣಯಕ್ಕೆ ಬಂದಿದ್ದಾರೆ. ರಾಘವಾಂಕ ಕವಿಯ ಕಥಾನಾಯಕ ಸಿದ್ಧರಾಮನನ್ನು ಕುರಿತಂತೆ, ಆ ಕಥೆಯ ಮೂಲ ಬೆಳವಣಿಗೆಯ ಬಗೆಗೆ ಸುದೀರ್ಘವಾಗಿ ವಿವರಿಸಲಾಗಿದೆ. ಇದೇ ಸಂದರ್ಭದಲ್ಲಿ ಸಿದ್ಧರಾಮನು ಶೈವನೇ ಅಥವಾ ವೀರಶೈವನೇ ಎಂಬ ವಿಷಯದ ಬಗೆಗೆ ಚರ್ಚಿಸಿ ಸಿದ್ಧರಾಮನು ಮೊದಲು ಶೈವನಾಗಿದ್ದು ನಂತರದಲ್ಲಿ ವೀರಶೈವನಾಗಿರಬೇಕೆಂದು ತೀರ್ಮಾನಕ್ಕೆ ಬಂದಿದ್ದಾರೆ.

ಧಾರವಾಡದ ಶ್ರೀ ಹಾಲಭಾವಿಯವರು ಕಳಿಸಿದ್ದ ಕಾಗದದ ಪ್ರತಿ ಮದ್ರಾಸ್ ಓಲಿಯಂಟಲ್ ಲೈಬ್ರರಿಯಲ್ಲಿರುವ ಓಲೆಯ ಪ್ರತಿ, ಮೈಸೂರು ಓರಿಯಂಟಲ್ ಲೈಬ್ರರಿಗೆ ಹೊಸದಾಗಿ ಬಂದ ಕಾಗದ ಪ್ರತಿ ಹಾಗೂ ಕ್ರಿ. ಶ. ೧೮೮೩ರಲ್ಲಿ ಮದ್ರಾಸಿನಲ್ಲಿ ಮುದ್ರಿತವಾದ ಪುಸ್ತಕ ಈ ಎಲ್ಲ ಆಕರಗಳನ್ನಿಟ್ಟುಕೊಂಡು ಸಿದ್ಧರಾಮ ಚಾರಿತ್ರ ಕೃತಿಯನ್ನು ಸಂಪಾದಿಸಿರುವುದಾಗಿ ತಿಳಿಸಲಾಗಿದೆ. ಪುಸ್ತಕದ ಕೊನೆಗೆ ಮಹತ್ವದ ಟಿಪ್ಪಣೆಗಳನ್ನು ಕೊಡಲಾಗಿದೆ. ಇಲ್ಲಿ ಡಿ. ಎಲ್. ಎಸ್. ಅವರ ಶ್ರಮ ಎದ್ದು ಕಾಣುತ್ತದೆ. ಅಚ್ಚುಕಟ್ಟಾಗಿ ಶಬ್ದಕೋಶವನ್ನು ಕೊನೆಯ ಪುಟಕಗಳಲ್ಲಿ ಅಳವಡಿಸಲಾಗಿದೆ. ಶಿವಮೊಗ್ಗದ ಕರ್ನಾಟಕ ಸಂಘವು ಈ ಕೃತಿಯನ್ನು ಪ್ರಕಟಿಸಿದೆ.

**೫. ಶಿವಕೋಟ್ಯಾಚಾರ್ಯವಿರಚಿತ ವಡ್ಡಾರಾಧನೆ (೧೯೪೯)**

ತಮ್ಮ ವಿದ್ಯಾಗುರುಗಳಾದ ಬಿ. ಎಂ. ಶ್ರೀ ಕಂಠಯ್ಯನವರಿಗೆ ಈ ಕೃತಿಯನ್ನು ಅರ್ಪಣೆ ಮಾಡಲಾಗಿದೆ. ಈ ಕೃತಿ ಬೇರೆ ಬೇರೆ ವಿಶ್ವವಿದ್ಯಾಲಯಗಳ ವಿವಿಧ ತರಗತಿಗಳಿಗೆ ಪಠ್ಯವಾಗಿ ಈಗಾಗಲೇ ಅನೇಕ ಮುದ್ರಣಗಳನ್ನು ಕಂಡಿದೆ. ಆಗಸ್ಟ್ ೧, ೧೯೪೯ರಲ್ಲಿ ಪ್ರಥಮ ಮುದ್ರಣವಾಗಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ ಈ ಕೃತಿ; ೧೯೯೩ರಲ್ಲಿ ಎಂಟನೆಯ ಮುದ್ರಣವಾಗಿ, ಮೈಸೂರಿನ ಡಿ. ವಿ. ಕೆ. ಮೂರ್ತಿ ಪ್ರಕಾಶನದಿಂದ ಹೊರಬಂದಿದೆ. ಇದರಲ್ಲಿ ಒಟ್ಟು ೧೯ ಕಥೆಗಳಿವೆ.

ಈ ಕೃತಿಯಲ್ಲಿ ಪ್ರತಿಯೊಂದು ಕಥೆಗೂ ಮಹತ್ವದ ಟಿಪ್ಪಣೆಗಳನ್ನು ಕೊಡಲಾಗಿದೆ. ಇಲ್ಲೆಲ್ಲಾ ಡಿ. ಎಲ್. ಎನ್. ಅವರ ಪಾಂಡಿತ್ಯದ ಶ್ರಮ ಎದ್ದು ಕಾಣುತ್ತದೆ. ಕಠಿಣ ಪದಗಳ ಶಬ್ದಕೋಶ, ಜೈನಪಾರಿಭಾಷಿಕ ಶಬ್ದಕೋಶ, ಉದ್ಧೃತ ಪದ್ಯಗಳ ಅಕಾರಾದಿ, ಸಂಕೇತಗಳ ವಿವರ ಇವೆಲ್ಲಾ ಅನುಬಂಧದಲ್ಲಿ ಬಂದಿವೆ. ತುಂಬಾ ಉಪಯುಕ್ತವಾದ ಅನುಬಂಧಗಳನ್ನು ಡಿ. ಎಲ್. ಎಸ್. ನೀಡಿದ್ದಾರೆ. ಮೂವತ್ತೈದು ಪುಟಗಳ ತಮ್ಮ ದೀರ್ಘಪೀಠಿಕೆಯಲ್ಲಿ ಸಂಪಾದಕರು ಈ ಕೃತಿಯ ಹಸ್ತಪ್ರತಿಗಳ ಬಗೆಗೆ, ಗ್ರಂಥದ ಹೆಸರಿನ ಬಗೆಗೆ, ಕವಿಯ ಕಾಲ ದೇಶಗಳ ಬಗೆಗೆ ಸಂಶೋಧನಾತ್ಮಕ ವಾದ ವಿಚಾರಗಳನ್ನು ತಿಳಿಸಿದ್ದಾರೆ.

ಆರು ಹಸ್ತಪ್ರತಿಗಳನ್ನಾಧರಿಸಿ ಈ ಕೃತಿಯನ್ನುವರು ಸಂಪಾದಿಸಿ ಕೊಟ್ಟಿದ್ದಾರೆ. ಹಸ್ತಪ್ರತಿಗಳ ಪರಸ್ಪರ ಸಂಬಂಧವನ್ನು ಗುರುತಿಸುವಲ್ಲಿ ಯಶಸ್ವಿಯಾಗಿದ್ದಾರೆ. ಕೃತಿಯ ಹೆಸರು, ಕವಿಯ ಹೆಸರು ಇವುಗಳನ್ನು ಕುರಿತು ಚರ್ಚೆ ನಡೆಸಲಾಗಿದೆ. ಕವಿಯ ಕಾಲದ ಬಗೆಗೆ ದೀರ್ಘ ಚರ್ಚೆಯನ್ನು ಪ್ರಾರಂಭಿಸಿ ಶಾಸನ, ಮತ್ತಿತರ ವಿದ್ವಾಂಸರ ಅಭಿಪ್ರಾಯಗಳನ್ನವಲಂಬಿಸಿ ಕವಿಯ ಕಾಲವನ್ನು ಕ್ರಿ. ಶ. ೯೨೦ ಎಂದು ಖಚಿತಪಡಿಸಿದ್ದಾರೆ. ಶಿವಕೋಟಿ ಬಳ್ಳಾರಿ ಜಿಲ್ಲೆಯ ಕೋಗಳಿ ನಾಡಿಗೆ ಸೇರಿರಬಹುದೆಂಬ ಸಂಗತಿಯನ್ನವರು ಪ್ರಸ್ತಾಪಿಸಿದ್ದಾರೆ* ಪೀಠಿಕೆಯಲ್ಲಿ ಪ್ರಸ್ತಾಪಿಸಲಾಗಿರುವ ವಡ್ಡಾರಾಧಾನೆಯ ಕಥೆಗಳ ತೌಲನಿಕ ಅಧ್ಯಯನ ಗಮನ ಸೆಳೆಯುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಈ ಕೃತಿ ಪ್ರಕಟಿಸಿದೆ.

---

* ಡಾ. ಹಂಪನಾ ಅವರು ವಡ್ಡಾರಾಧನೆ 'ಭ್ರಾಜಿಷ್ಣು' ವಿರಚಿತ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಂಗದ ವತಿಯಿಂದ ಪ್ರಕಟವಾಗಿರುವ ಈ ಕೃತಿಯನ್ನು ಹೆಚ್ಚಿನ ವಿವರಗಳಿಗಾಗಿ ನೋಡಬಹುದು – ಸಂಪಾದಕರು

### ೬. ಸಿದ್ಧರಾಮ ಚರಿತೆಯ ಸಂಗ್ರಹ (೧೯೫೧)

೧೯೪೧ರಲ್ಲಿ ವೆಂಕಟಣ್ಣಯ್ಯನವರೊಂದಿಗೆ ಸೇರಿ ಸಂಪಾದಿಸಿದ್ದ ರಾಘವಾಂಕನ "ಸಿದ್ಧರಾಮಚಾರಿತ್ರದ" ಸಂಗ್ರಹ ಇದಾಗಿದೆ. ಇಲ್ಲಿಯೂ ಕೂಡ ವಿಸ್ತಾರವಾದ ಪೀಠಿಕೆ ಇದೆ. ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ರಾಘವಾಂಕ ಕವಿಯ ಇತಿವೃತ್ತ, ಸಿದ್ಧರಾಮನ ಐತಿಹಾಸಿಕ ವಿವರಗಳು, ಕಥಾಸಾರಾಂಶ, ಉಪಯುಕ್ತವಾದ ಕಠಿಣಪದಕೋಶ ಹಾಗೂ ಟಿಪ್ಪಣಿಗಳಿವೆ. ಶಿವಶರಣ ಸಿದ್ಧರಾಮನ ಲಿಂಗದೀಕ್ಷೆ ವಿಷಯಕ್ಕೆ ಸಂಬಂಧಿಸಿದಂತೆ ವಿವರವಾಗಿ ಚರ್ಚಿಸಲಾಗಿದೆ. ಕೃತಿಯ ಬಗೆಗೆ ವಿಮರ್ಶಾತ್ಮಕ ಅಂಶಗಳೂ ಸೇರಿಕೊಂಡಿವೆ. ಮೈಸೂರಿನ ಶಾರದಾಮಂದಿರದವರು ಈ ಪುಸ್ತಕ ಪ್ರಕಟಿಸಿದ್ದಾರೆ.

### ೭. ಸುಕುಮಾರ ಚರಿತಂ (೧೯೫೪)

ಸುಮಾರು ೧೦೬೦ರಲ್ಲಿದ್ದ ಶಾಂತಿನಾಥ ಕವಿಯ ಸುಕುಮಾರ ಚರಿತ್ರೆಯನ್ನು ತ. ಸು. ಶಾಮರಾವ್ ಅವರೊಂದಿಗೆ ಸೇರಿ ಡಿ. ಎಲ್. ಎಸ್. ಅವರು ಸಂಪಾದಿಸಿದ್ದಾರೆ. ಎರಡು ಹಸ್ತಪ್ರತಿಗಳನ್ನು ಮಾತ್ರ ಇಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ. ಹೀಗಾಗಿ ಪಾಠಾಂತರದ ಸಮಸ್ಯೆಯನ್ನು ಕಾಣಬಹುದಾಗಿದೆ. ಆದರೆ ಪೀಠಿಕೆ ಮಾತ್ರ ಅನೇಕ ವಿವರಗಳನ್ನೊಳಗೊಂಡಿದೆ. ಕವಿಯ ಇತಿವೃತ್ತ, ಕಥಾಸಾರಾಂಶ, ಕಥೆಯ ಮೂಲ ಇವೆಲ್ಲಾ ಪೀಠಿಕೆಯಲ್ಲಿ ವಿಸ್ತಾರವಾಗಿ ಮೂಡಿಬಂದಿವೆ. ವಡ್ಡಾರಾಧನೆಯೊಂದಿಗೆ ತುಲನೆಮಾಡಿ ವಿಮರ್ಶಿಸಲಾಗಿದೆ. ಕನ್ನಡದ ಇತರ ಸುಕುಮಾರ ಚರಿತೆಗಳ ಬಗೆ ಪ್ರಸ್ತಾಪಿಸಲಾಗಿದೆ. ಕವಿಕೃತಿಪರಿಚಯ ಮಾಡಿಕೊಡುವ ಪರಿಶಿಷ್ಟ ಹಾಗೂ ಶಬ್ದಕೋಶಗಳು ಕೂಡ ಇವೆ. ಶಿವಮೊಗ್ಗದ ಕರ್ನಾಟಕ ಸಂಘವು ಈ ಕೃತಿಯನ್ನು ಪ್ರಕಟಿಸಿದೆ.

### ೮. ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ (೧೯೫೯)

ಕೇಶಿರಾಜನ ಸ್ವಹಸ್ತದಿಂದ ಲಿಖಿತವಾದ ಶಬ್ದಮಣಿದರ್ಪಣದ ಮೂಲ ಪ್ರತಿ ದೊರಿತಿಲ್ಲ. ನಕಲು ಮಾಡಿದ ಪ್ರತಿಗಳಲ್ಲಿ ೧೪೭೩ರಲ್ಲಿ ಲಿಖಿತವಾದ ಪ್ರತಿಯೇ ಹಳೆಯದು. ಇದು ಮೂಡಬಿದ್ರಿ ಜೈನ ಮಠಗಳ ತಾಡೋಲೆ ಗ್ರಂಥ ಸಂಗ್ರಹದಲ್ಲಿದೆ. ಶಬ್ದಮಣಿದರ್ಪಣವನ್ನು -ಮೊದಲು ಸಂಪಾದಿಸಿ ಪ್ರಕಟಿಸಿದವರು, ಆಗ ವಿದ್ಯಾಭ್ಯಾಸ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಜೆ. ಗ್ಯಾರೆಟ್ ಅವರು. ಕ್ರಿ. ಶ. ೧೮೬೮ರಲ್ಲಿ ಈ ಪುಸ್ತಕ ಪ್ರಕಟವಾಯಿತು. ಇದಾದನಂತರ ರೆವರೆಂಡ್ ಕಿಟ್ಟೆಲ್ ಅವರ ಸಂಪಾದಕತ್ವದಲ್ಲಿ ಮೂರು ಪರಿಷ್ಕೃತ ಮುದ್ರಣಗಳು ಪ್ರಕಟವಾದವು. ಕಿಟ್ಟೆಲ್ ಸಂಪಾದಕತ್ವದಲ್ಲಿ ಕ್ರಿ. ಶ. ೧೮೭೨ರಲ್ಲಿ ಮೊದಲ ಮುದ್ರಣ ಹೊರಬಂತು. ಕ್ರಿ. ಶ. ೧೯೨೦ರಲ್ಲಿ ಈ ಪುಸ್ತಕದ ಪರಿಷ್ಕೃತ ಮುದ್ರಣವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಯಿತು. ಇದು ಕಿಟ್ಟೆಲ್ ಅವರ ಪುಸ್ತಕವನ್ನು ಬಹುಮಟ್ಟಿಗೆ ಹೋಲುತ್ತದೆ. ಇದರಲ್ಲಿ ನಿಟ್ಟೂರ ನಂಜಯ್ಯನ ಟೀಕೆಯೂ ಇದೆ. ಕ್ರಿ. ಶ. ೧೯೩೦ರಲ್ಲಿ ಎ. ವೆಂಕಟರಾವ್ ಮತ್ತು ಎಚ್. ಶೇಷಅಯ್ಯಂಗಾರ್ ಇವರಿಂದ ಸಂಪಾದಿಸಲ್ಪಟ್ಟ ಶಬ್ದಮಣಿದರ್ಪಣವು ಮದ್ರಾಸ್ ವಿಶ್ವವಿದ್ಯಾಲಯದಿಂದ ಪ್ರಕಟವಾಯಿತು. ಇಷ್ಟೆಲ್ಲಾ ಶಬ್ದಮಣಿದರ್ಪಣಗಳ ಪರಿಷ್ಕೃತ ಪ್ರತಿಗಳು ಬಂದನಂತರ,

ಕ್ರಿ. ಶ. ೧೯೫೮ರಲ್ಲಿ ಮೊದಲ ಮುದ್ರಣವಾಗಿ ಡಿ. ಎಲ್. ಎನ್. ಸಂಪಾದಕತ್ವದಲ್ಲಿ ಈ ಕೃತಿ ಪ್ರಕಟವಾಯಿತು. ಶ್ರವಣಬೆಳಗೊಳದ ಓಲೆಪ್ರತಿ ಡಿ. ಎಲ್. ಎನ್. ಅವರಲ್ಲಿದ್ದ ಓಲೆ ಪ್ರತಿ, ಕಿಟ್ಟೆಲ್ ಅವರ ಮೂರನೆಯ ಆವೃತ್ತಿಯ ಮುದ್ರಿತಪ್ರತಿ ಕನ್ನಡ ಸಾಹಿತ್ಯ ಪರಿಷತ್ತಿನ ಮುದ್ರಿತ ಪ್ರತಿ, ಇವೆಲ್ಲವುಗಳನ್ನಿಟ್ಟುಕೊಂಡು ಮತ್ತೆ ಪರಿಷ್ಕರಿಸಿ ಡಿ. ಎಲ್. ಎನ್. ಈ ಕೃತಿ ತಂದಿದ್ದಾರೆ. ಪಾಠಸಮಸ್ಯೆಗಳನ್ನು ಗುರುತಿಸಿ ಅವುಗಳನ್ನು ಪರಿಷ್ಕರಿಸುವಲ್ಲಿ ಡಿ. ಎಲ್. ಎನ್. ಅವರ ಶ್ರಮಯೆದ್ದು ಕಾಣುತ್ತದೆ.

ಶಬ್ದಮಣಿದರ್ಪಣದ ಪಾಠದ ಬಗೆಗೆ ಅನೇಕರು ಸಂಶೋಧನೆ ಮಾಡಿದ್ದಾರೆ. ಅವರಲ್ಲಿ ಪ್ರೊ. ಡಿ. ಕೆ. ಭೀಮಸೇನರಾಯರು, ಡಾ. ಎಂ. ಎಂ. ಕಲಬುರ್ಗಿಯವರು ಮತ್ತು ಡಾ. ಹಂಪನಾಗರಾಜಯ್ಯನವರು ಪ್ರಮುಖರಾಗಿದ್ದಾರೆ. ಈ ವಿದ್ವಾಂಸರ ಚರ್ಚೆಗಳನ್ನು ಡಿ. ಎಲ್. ಎನ್. ಅವರು ಗಂಭೀರವಾಗಿ ಪರಿಗಣಿಸಿ ತಮ್ಮ ಪ್ರಸ್ತಾವನೆಯಲ್ಲಿ ಉಲ್ಲೇಖಿಸಿದ್ದಾರೆ. ಪ್ರಯೋಗಗಳ ಆಕರವೇ ಆಗಿರುವ ಶಬ್ದಮಣಿದರ್ಪಣದ ವೈಶಿಷ್ಟ್ಯತೆಯನ್ನು ಡಿ. ಎಲ್. ಎನ್. ಸರಿಯಾಗಿಯೇ ಗುರುತಿಸಿದ್ದಾರೆ. ಕೇಶೀರಾಜನ ಕಾಲ-ವ್ಯಕ್ತಿತ್ವ ಕುರಿತಂತೆ ತಮ್ಮ ಪ್ರಸ್ತಾವನೆಯಲ್ಲಿ ದೀರ್ಘವಾಗಿ ಚರ್ಚಿಸಿದ್ದಾರೆ.

ಡಿ. ಎಲ್. ಎನ್. ಅವರಿಂದ ಸಂಪಾದಿತವಾದ ಈ ಕೃತಿಯಲ್ಲಿ ನಿಟ್ಟೂರು ನಂಜಯ್ಯನ ಟೀಕೆಯಿದೆ. ಇದರಲ್ಲಿ ೩೪೧ ಸೂತ್ರಗಳಿವೆ. ಪುಸ್ತಕದುದ್ದಕ್ಕೂ ಡಿ. ಎಲ್. ಎನ್. ಅವರ ಶ್ರಮಯೆದ್ದು ಕಾಣುತ್ತದೆ. ಮೈಸೂರಿನ ಶಾರಾದಾ ಮಂದಿರದವರು ಈ ಪುಸ್ತಕವನ್ನು ಪ್ರಕಟಿಸಿದ್ದಾರೆ.

### ೯. ಗೋವಿನಹಾಡು (೧೯೬೦)

ಇದೊಂದು ಜನಪ್ರಿಯ ಕಥನಗೀತೆ. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಗಾಗಿ ಈ ಕೃತಿಯನ್ನು ಸಿದ್ಧಪಡಿಸಲಾಗಿದೆ. ಎರಡು ಕೈಬರೆಹದ ಪ್ರತಿಗಳು ಹಾಗೂ ಪೇಟೆ ಮುದ್ರಣದ ಪ್ರಕಟಿತ ಪ್ರತಿಗಳನ್ನು ಪರಿಶೀಲಿಸಿ ಶುದ್ಧಪಾಠಗಳನ್ನು ಗುರುತಿಸಿ ಅಚ್ಚುಕಟ್ಟಾಗಿ ಸಂಪಾದಿಸಲಾಗಿದೆ. ಎಂದಿನಂತೆ ಡಿ. ಎಲ್. ಎನ್. ಅವರ ಸಂಪಾದನೆಯ ಶಿಸ್ತು ಇಲ್ಲಿಯೂ ಎದ್ದುಕಾಣುತ್ತದೆ. ಮೈಸೂರಿನ ಶಾರದಾ ಮಂದಿರದವರು ಈ ಚಿಕ್ಕಪುಸ್ತಕವನ್ನು ಪ್ರಕಟಿಸಿದ್ದಾರೆ.

## II. ಸ್ವತಂತ್ರ ಕೃತಿಗಳು

### ೧. ಹಂಪೆ ಹರಿಹರ (೧೯೩೯)

ಮೈಸೂರು ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಈ ಕಿರುಪುಸ್ತಕ ೧೯೩೯ರಲ್ಲಿ ಪ್ರಕಟವಾಗಿದೆ. ಹರಿಹರನ ಜೀವನ ಚರಿತ್ರೆಯ ಬಗೆಗೆ ಮೊದಲನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಹರಿಹರನ ಗಿರಿಜಾಕಲ್ಯಾಣ, ಶತಕಗಳು, ರಗಳೆಗಳು, ಗದ್ಯ ಇವುಗಳನ್ನು ಕುರಿತಂತೆ ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸಲಾಗಿದೆ. ಹರಿಹರ ಕವಿಯ ಶೈಲಿ, ಆತನ ಕೃತಿಗಳ ಉದ್ದೇಶವನ್ನು ಕುರಿತು ಚರ್ಚಿಸಲಾಗಿದೆ. ಜನಸಾಮಾನ್ಯರಿಗೆ

ಹರಿಹರನ ಬಗೆಗೆ ಹೆಚ್ಚಿನ ಆಸಕ್ತಿಯನ್ನು ಹುಟ್ಟಿಸುವ ಈ ಚಿಕ್ಕ ಕೃತಿ ಪರಿಚಯಾತ್ಮಕವಾಗಿದ್ದು ಸರಳನಿರೂಪಣೆಯಿಂದ ಕೂಡಿದೆ.

### ೨. ಶಬ್ದವಿಹಾರ (೧೯೫೦)

ಇದು ಯಾವುದೇ ಒಬ್ಬ ಕವಿಯ ಕುರಿತಾದ ಕೃತಿಯಾಗಿರದೆ, ಪ್ರಾಚೀನ ಕನ್ನಡ ಕಾವ್ಯಗಳಲ್ಲಿರುವ ಕೆಲವು ಕಠಿಣ ಶಬ್ದಗಳ ಅರ್ಥಗಳನ್ನು ಹಾಗೂ ಅವುಗಳ ನಿಷ್ಪತ್ತಿಗಳನ್ನು ಕುರಿತಾದ ಲೇಖನಗಳ ಸಂಗ್ರಹವಾಗಿದೆ. ಈ ಲೇಖನಗಳಲ್ಲಿ ಡಿ. ಎಲ್. ಎನ್. ಅವರ ಪಾಂಡಿತ್ಯವನ್ನು ಕಾಣಬಹುದಾಗಿದೆ. ಕೆಲವು ಸಮಸ್ಯಾತ್ಮಕ ಶಬ್ದಗಳ ಬಗೆಗೆ ಸರಿಯಾದ ಅರ್ಥಗಳನ್ನು ತಿಳಿಸುವ ಈ ಕೃತಿ ಕನ್ನಡದಲ್ಲಿಯೇ ವಿನೂತನ ಪ್ರಯೋಗವಾಗಿ ಕಾಣುತ್ತದೆ. ಈ ಚಿಕ್ಕ ಪುಸ್ತಕವನ್ನು ಮೈಸೂರಿನ ಶಾರದಾ ಮಂದಿರದವರು ಪ್ರಕಟಿಸಿದ್ದಾರೆ.

### ೩. ಕನ್ನಡ ಗ್ರಂಥ ಸಂಪಾದನೆ (೧೯೬೪)

ಗ್ರಂಥಸಂಪಾದನೆಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಇದು ಮೊದಲ ಪ್ರಯತ್ನವಾಗಿದೆ. ಆ ಕಾಲಕ್ಕೆ ಇತರ ಆಧುನಿಕ ಭಾರತೀಯ ಭಾಷೆಗಳಲ್ಲಿ ಇಂತಹ ಗ್ರಂಥ ರಚಿತವಾಗಿರಲಿಲ್ಲ. ಡಿ. ಎಲ್. ಎನ್. ಕನ್ನಡದ ಮೂಲಕ ಅಂತಹದ್ದನ್ನು ಪ್ರಾರಂಭಿಸಿದ್ದಾರೆ. ಲೇಖಕರ ವಿದ್ವತ್ತಿಗೆ ಸಾಕ್ಷಿಯಾಗಿರುವ ಈ ಕೃತಿ ಡಿ. ಎಲ್. ಎನ್. ಅವರಿಗೆ ಖ್ಯಾತಿ ತಂದುಕೊಟ್ಟ ಕೃತಿಯಾಗಿದೆ. ಪಾಶ್ಚಾತ್ಯ ವಿದ್ವಾಂಸರ ಗ್ರಂಥಸಂಪಾದ್ನೆಯ ತತ್ವಗಳನ್ನು, ಪ್ರಾಚೀನ-ಮಧ್ಯಕಾಲೀನ ಕೃತಿಗಳಿಗೆ ಅನ್ವಯಿಸಿ, ಇಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

ಪ್ರಾಚೀನ ಗ್ರಂಥಗಳನ್ನು ರಕ್ಷಿಸಿಕೊಂಡು ಅವುಗಳ ಪಾಠ ಪರಿಶುದ್ಧತೆಯನ್ನುಳಿಸಿಕೊಂಡು ಬರಬೇಕೆಂಬ ತಿಳಿವಳಿಕೆ ಭಾರತೀಯರಿಗೆ ಹೊಸದೇನಲ್ಲ. ವೇದೋಪನಿಷತ್ತುಗಳ ಪಾಠಗಳು ಸ್ವಲ್ಪವೂ ಕೆಡದಂತೆ, ಮೌಖಿಕ ಪರಂಪರೆಯ ಮೂಲಕವೇ ಉಳಿಸಿಕೊಂಡು ಬಂದದ್ದನ್ನು ಗಮನಿಸಬಹುದಾಗಿದೆ. ಗ್ರಂಥಸಂಪಾದನೆಯ ಚರಿತ್ರೆಯನ್ನು ಕುರಿತು ಲೇಖಕರು ಮೊದಲ ಅಧ್ಯಾಯದಲ್ಲಿ ವಿವರವಾಗಿ ತಿಳಿಸಿದ್ದಾರೆ. ಪಾಶ್ಚಾತ್ಯ ವಿದ್ವಾಂಸರ ಸೇವೆಯನ್ನು ಇಲ್ಲಿ ಸ್ಮರಿಸಲಾಗಿದೆ. ಇಪ್ಪತ್ತನೆಯ ಶತಮಾನದಲ್ಲಿ ಗ್ರಂಥಸಂಪಾದನ ಶಾಸ್ತ್ರವನ್ನು ಬೆಳೆಸಿರುವ ವಿದ್ವಾಂಸರನ್ನು ನೆನಪಿಸುತ್ತ ಪಾಲ್‌ಮಾಸ್‌ರಂತಹ ಅಗ್ರಗಣ್ಯರನ್ನು ಉಲ್ಲೇಖಿಸಿದ್ದಾರೆ. ಜರ್ಮನಿಯಲ್ಲಿ ಗ್ರಂಥಸಂಪಾದನ ಶಾಸ್ತ್ರವನ್ನು ಕುರಿತು ಬಂದ ಡಾ. ವಿ. ಎಸ್. ಸುಕಥಣ್‌ಕರ್ ಅವರ ಸಾಧನೆ ಕುರಿತು ಹೇಳಲಾಗಿದೆ.

ಹನ್ನೆರಡು ಅಧ್ಯಾಯಗಳಲ್ಲಿ ಬಿಚ್ಚಿಕೊಳ್ಳುವ ಈ ಕೃತಿ ಲೇಖನ ಸಾಮಗ್ರಿಗಳನ್ನು ಕುರಿತಂತೆ, ಲಿಪಿಕಾರರನ್ನು ಕುರಿತಂತೆ ಹಾಗೂ ಹಸ್ತಪ್ರತಿಗಳ ಸ್ವರೂಪ ಮತ್ತು ವಿಂಗಡಣೆಯನ್ನು ಕುರಿತಂತೆ ವಿವರವಾಗಿ ಚರ್ಚಿಸಲಾಗಿದೆ. ಹಸ್ತಪ್ರತಿಗಳ ಪರಸ್ಪರ ಸಂಬಂಧ, ಸ್ಖಾಲಿತ್ಯಗಳು, ಪಾಠಪರಿಷ್ಕರಣಕಾರ್ಯ ಇವುಗಳ ಬಗೆಗೆ ವಿವರಿಸಲಾಗಿದೆ. ಗ್ರಂಥಸಂಪಾದಕರಿಗೆ ಅನೇಕ ಸೂಚನೆಗಳನ್ನು ಕೊಡುವ ಈ ಕೃತಿಯಲ್ಲಿ ಮುದ್ರಿತ ಗ್ರಂಥಗಳ ಸಂಪಾದನೆಯನ್ನು ಮಾಡುವ ವಿಧಾನದ ಬಗೆಗೂ ತಿಳಿಸಲಾಗಿದೆ.

ಅಕಾರಾದಿ ಸೂಚಿ, ಓದಬಹುದಾದ ಪುಸ್ತಕಗಳ ಪಟ್ಟಿ, ಕನ್ನಡ ಹಸ್ತಪ್ರತಿ ಭಂಡಾರಗಳ ವಿವರಗಳು ಇವೆಲ್ಲಾ ಅನುಬಂಧಗಳಲ್ಲಿ ಬಂದಿವೆ. ಲಿಪಿಕಾರರಿಂದ ಕಾಲಕ್ರಮದಲ್ಲಿ ದೋಷದಿಂದ ಕೂಡಿರುವ ಕವಿಗಳ ಕೃತಿಗಳನ್ನು ಪರಿಶುದ್ಧರೂಪಕ್ಕೆ ತರುವದೇ ಗ್ರಂಥಸಂಪಾದನೆಯ ಪ್ರಮುಖ ಉದ್ದೇಶವಾಗಿದೆ. ಮುದ್ರಣಕಲೆಯ ಪರಂಪರೆಯನ್ನು ಹೇಳಿರುವ ಡಿ. ಎಲ್. ಎನ್. ಅವರು ಕಾಗದ ತಯಾರಿಕೆಯನ್ನು ಮೊತ್ತಮೊದಲು ಕಂಜುಹಿಡಿದವರು ಚೀನಾ ದೇಶದವರೆಂದು ತಿಳಿಸಿದ್ದಾರೆ. ಕ್ರಿ. ಪೂ. ೫೦ ರಲ್ಲಿಯೇ ಅವರು ಮರದಲ್ಲಿ ಕೊರೆದ ಅಥವಾ ಮಣ್ಣಿನಿಂದ ಮಾಡಿದ ಅಚ್ಚುಗಳ ಸಹಾಯದಿಂದ ಗ್ರಂಥಗಳನ್ನು ಮುದ್ರಿಸುತ್ತಿದ್ದರೆಂದು ವಿವರಿಸಿದ್ದಾರೆ. ಹೀಗೆ ಗ್ರಂಥಸಂಪಾದನೆಯ ಬಗೆಗೆ ಇದು ಮಹತ್ವದ ಕೃತಿಯಾಗಿದೆ. ಮೈಸೂರಿನ ಶಾರದಾ ಮಂದಿರದವರು ಈ ಕೃತಿಯನ್ನು ಪ್ರಕಟಿಸಿದ್ದಾರೆ.

### ೪. ಪಂಪಭಾರತ ದೀಪಿಕೆ (೧೯೭೧)

ಪಂಪಕವಿಯ "ವಿಕ್ರಮಾರ್ಜುನ ವಿಜಯ" ಕೃತಿಗೆ ಮೊದಲಬಾರಿಗೆ ಬರೆದ ಸವಿಸ್ತಾರವಾದ ವ್ಯಾಖ್ಯಾನಗ್ರಂಥ ಇದಾಗಿದೆ. ಪ್ರತಿಯೊಂದು ಪದದ ಅರ್ಥ, ವ್ಯಾಕರಣ, ಛಂದಸ್ಸು, ಪೂರ್ವಕಥಾವೃತ್ತಾಂತ ಹೀಗೆ ಅನೇಕ ವಿಷಯಗಳನ್ನು ಇಲ್ಲಿ ವಿವರಿಸಲಾಗಿದೆ. ಪಾಠ ಪರಿಷ್ಕರಣದ ಕಾರ್ಯವನ್ನೂ ಮಾಡಲಾಗಿದೆ. ಸಾಮಾನ್ಯ ಜನ ಪಂಪಭಾರತವನ್ನೋದಲು, ಅರ್ಥೈಸಿಕೊಳ್ಳಲು ಈ ಕೃತಿ ತುಂಬಾ ಪ್ರಯೋಜನಕಾರಿಯಾಗಿದೆ. ಡಿ. ಎಲ್. ಎನ್. ಸಮರ್ಥ ಭಾಷಾ ಪಂಡಿತರಾಗಿದ್ದರೆಂಬುದಕ್ಕೆ ಈ ಕೃತಿ ಪ್ರಮುಖ ಸಾಕ್ಷಿಯಾಗಿ ನಿಲ್ಲುತ್ತದೆ.

### ೫. ಪೀಠಿಕೆಗಳು ಲೇಖನಗಳು (೧೯೭೧)

ಇದು ಡಿ. ಎಲ್. ಎನ್. ಅವರ ಸ್ವತಂತ್ರ ಕೃತಿಗಳ (ಗ್ರಂಥ ಸಂಪಾದನೆಯನ್ನು ಬಿಟ್ಟು) ಹಾಗೂ ಪ್ರಕಟಿತ ಬಿಡಿ ಲೇಖನಗಳನ್ನೊಳಗೊಂಡ, ಅವರ ಸಮಗ್ರಸಾಹಿತ್ಯದಂತಿದೆ. "ಹಂಪೆಯ ಹರಿಹರ" ಮತ್ತು "ಶಬ್ದವಿಹಾರ" ದಂತಹ ಚಿಕ್ಕಕೃತಿಗಳೂ ಇದರಲ್ಲಿ ಸೇರಿವೆ. ಡಿ. ಎಲ್. ಎನ್. ಅವರ ಸಂಪಾದಿತ ಕೃತಿಗಳ ಪೀಠಿಕೆಗಳೂ ಇದರಲ್ಲಿ ಪ್ರಕಟವಾಗಿವೆ.

ಎಚ್ಚೆಸ್ಕೆ ಅವರ "ಕನ್ನಡದಲ್ಲಿ ವಿಡಂಬನ ಸಾಹಿತ್ಯ" ಹಾಗೂ "ವ್ಯಾವಹಾರಿಕ ಕನ್ನಡ", ಟಿ. ಕೇಶವಭಟ್ಟ ಅವರ "ತೂಗುದೀವಿಗೆ", ಶಿವಬಸವಸ್ವಾಮಿಗಳ "ಬಸವಸ್ತೋತ್ರಗೀತೆ", ಕೆ. ಎಸ್. ನ. ಅವರ "ಶಿಲಾಲತೆ", ಎಲ್ ಬಸವರಾಜು ಅವರ "ಶಿವದಾಸಗೀತಾಂಜಲಿ" ಮತ್ತು ಕೆ. ವೆಂಕಟರಾಮಪ್ಪಾಚಾರ್ಯರ "ಸಾಹಿತ್ಯದ ಹಿನ್ನಲೆ" ಈ ಮುಂತಾದ ಕೃತಿಗಳಿಗೆ ಡಿ. ಎಲ್. ಎನ್. ಅವರು ಬರೆದ ಮುನ್ನಡಿಗಳೂ ಇದರಲ್ಲಿ ಸೇರಿವೆ.

ಕನ್ನಡದಲ್ಲಿ ಬರೆದ ಅರವತ್ತೆರಡು ಸಂಶೋಧನಾ ಲೇಖನಗಳು, ಇಂಗ್ಲಿಷಿನಲ್ಲಿ ಬರೆದ ಎಂಟು ಲೇಖನಗಳು ಹಾಗೂ ಹನ್ನೆರಡು ವಿಮರ್ಶಾತ್ಮಕ ಲೇಖನಗಳು ಈ

ಕೃತಿಯಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ಅಗ್ಗಲದೇವ, ಅಭಿನವ ಪಂಪನ ಕಾಲ ವಿಚಾರ, ಕವಿ ಲಕ್ಷ್ಮೀಶ, ಕೆಲವರು ವಚನಕಾರರು, ಕೆಲವು ರಗಳೆಯ ಕವಿಗಳು, ಚೌಂಡರಸನ ಕಾಲ ವಿಚಾರ, ನಾಲ್ಕನೆಯ ಮಂಗರಸ, ಬಸವಣ್ಣನ ಕೆಲವು ವಚನಗಳ ಪಾಠ, ಸಾಹಿತ್ಯ ಚರಿತ್ರೆಯ ಸ್ವರೂಪ, ವಿಜಯನಗರ ಕಾಲದ ಸಾಹಿತ್ಯ, ಲಿಂಗಾರ್ಚನೆ ಮತ್ತು ಲಿಂಗಾರಾಧನೆ ಈ ಮೊದಲಾದ ಸಂಶೋಧನಾ ಲೇಖನಗಳು ಸಾಹಿತ್ಯ-ಇತಿಹಾಸಕ್ಕೆ ಸಂಬಂಧಿಸಿದಂತೆ ಹೊಸಬೆಳಕು ಚೆಲ್ಲುತ್ತವೆ. ಬೀದರ ಸಾಹಿತ್ಯದ ಸಮ್ಮೇಳನದ ಅಧ್ಯಕ್ಷ ಭಾಷಣವೂ ಇಲ್ಲಿಯೇ ಸೇರಿದೆ. ಅದೇ ರೀತಿ ರಂ. ಶ್ರೀ ಮುಗಳಿಯವರ ಅಕ್ಕ ಮಹಾದೇವಿ, ಶಿವರಾಮಕಾರಂತರ 'ಕನ್ಯಾಬಲಿ' ಮತ್ತು 'ಮರಳಿ ಮಣ್ಣಿಗೆ', ಅ. ನ. ಕೃ ಅವರ 'ಜೀವನ ಯಾತ್ರೆ' ಹಾಗೂ ಶ್ರೀರಂಗರ 'ವೈದ್ಯರಾಜ' ಈ ಮೊದಲಾದ ಕೃತಿಗಳಿಗೆ ಸಂಬಂಧಿಸಿದ ವಿಮರ್ಶಾಲೇಖನಗಳು ಗಮನ ಸೆಳೆಯುತ್ತವೆ.

ಹೀಗೆ ೬೧ ಬರೆಹಗಳ ೧೧೦೦ ಪುಟಗಳ ಈ ಬೃಹತ್‌ಗ್ರಂಥ ಡಿ. ಎಲ್. ಎನ್. ಅವರ ಪ್ರತಿಭೆ – ಪಾಂಡಿತ್ಯ-ಪರಿಶ್ರಮಗಳ ಸಂಕೇತವಾಗಿದೆ. ಸಾಹಿತ್ಯದ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ ಇದೊಂದು ಮಾರ್ಗದರ್ಶಕ ಗ್ರಂಥವಾಗಿದೆ. ಡಿ. ಎಲ್. ಎನ್. ಅವರ ಸಮಗ್ರಕೃತಿಗಳನ್ನೇ ಕಟ್ಟಿ ಕೊಂಡರುವ ಈ ಕೃತಿ ಅವರ ಬರೆಹಗಳು ಓದುಗರಿಗೆ ಒಂದೇ ಕಡೆ ದೊರೆಯುವಂತೆ ಮಾಡಿದೆ.

## III. ಡಿ. ಎಲ್. ಎನ್. ಕುರಿತಂತೆ ಕೃತಿಗಳು ಮತ್ತು ಪ್ರಶಸ್ತಿಗಳು

ಡಿ. ಎಲ್. ಎನ್. ಅವರಿಗೆ ಎರಡು ಅಭಿನಂದನ ಗ್ರಂಥಗಳನ್ನು ಅರ್ಪಿಸಲಾಗಿದೆ. ಡಿ. ಎಲ್. ಎನ್. ಅವರು ೧೯೬೦ರಲ್ಲಿ ಬೀದರದಲ್ಲಿ ನಡೆದ ೪೧ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದಾಗ ಆ ಸಂದರ್ಭದ ಸವಿನೆನಪಿಗಾಗಿ ಅವರಿಗೆ "ಜ್ಞಾನೋಪಾಸಕ" ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಲಾಗಿದೆ. ಅವರ ವ್ಯಕ್ತಿತ್ವ ಹಾಗೂ ವಿದ್ವತ್ತುಗಳನ್ನು ಕುರಿತಂತೆ ಅನೇಕ ಉಪಯುಕ್ತ ಲೇಖನಗಳು ಈ ಅಭಿನಂದನ ಗ್ರಂಥದಲ್ಲಿವೆ. ೧೯೬೭ರಲ್ಲಿ "ಉಪಾಯನ" ವೆಂಬ ಇನ್ನೊಂದು ಅಭಿನಂದನ ಗ್ರಂಥವನ್ನು ಅವರಿಗೆ ಅರ್ಪಿಸಲಾಗಿದೆ. ಅವರ ಮಿತ್ರರೂ ಶಿಷ್ಯರೂ ಕೂಡಿ ತಮ್ಮ ಪ್ರಬಂಧಗಳ ಮೂಲಕ ಅರ್ಪಣೆಯನ್ನು ಸೂಚಿಸಿದ್ದಾರೆ. ೪೭೭ ಪುಟಗಳ ಈ ಕೃತಿ ಬೆಂಗಳೂರಿನ ಸಂಭಾವನಾ ಗ್ರಂಥಪ್ರಕಾಶನ ಸಮಿತಿಯ ಪರವಾಗಿ ಪ್ರಕಟವಾಗಿದೆ. ಡಿ. ಎಲ್. ಎನ್. ಅವರನ್ನು ಕುರಿತಂತೆ ಇದರಲ್ಲಿ ಕೇವಲ ಮೂರು ಲೇಖನಗಳಿವೆ. ಟಿ. ಪಿ. ಕೃಷ್ಣಾಚಾರ್, ನಂ. ಶಿವರಾಮಶಾಸ್ತ್ರಿ ಮತ್ತು ದೇ. ಜವರೇಗೌಡ ಈ ಲೇಖನಗಳನ್ನು ಬರೆದಿದ್ದಾರೆ. ಕೊನೆಗೆ ಹಂಪನಾ ಅವರು ಡಿ. ಎಲ್. ಎನ್. ಅವರ ಕೃತಿಗಳ ವಿವರ ನೀಡಿದ್ದಾರೆ. ಡಿ. ಎಲ್. ಎನ್. ಅವರ ಬಗೆಗೆ ಈ ನಾಲ್ಕು ಲೇಖನಗಳನ್ನು ಬಿಟ್ಟರೆ ಉಳಿದ ೫೬ ಲೇಖನಗಳು ಕನ್ನಡ ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದವುಗಳಾಗಿವೆ.

ಡಿ. ಎಲ್. ಎನ್. ಅವರನ್ನು ಬೀದರದಲ್ಲಿ ೧೯೬೦ರಲ್ಲಿ ನಡೆದ ಅಖಿಲಭಾರತ ಸಾಹಿತ್ಯದ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆಮಾಡಿ ಗೌರವಿಸಲಾಗಿದೆ. ೧೯೬೭ರಲ್ಲಿ

ಮೈಸೂರು ಸರಕಾರ ಅವರಿಗೆ ರಾಜ್ಯ ಪ್ರಶಸ್ತಿ ನೀಡಿ ಗೌರವಿಸಿದೆ. ೧೯೬೯ರಲ್ಲಿ ಮೈಸೂರು ವಿಶ್ವವಿದ್ಯಾಲಯವು ಅವರ ವಿದ್ವತ್ತನ್ನು ಗೌರವಿಸಿ ಅವರಿಗೆ ಡಿ. ಲಿಟ್ ಪದವಿ ನೀಡಿ ಸನ್ಮಾನಿಸಿದೆ.

**IV. ಸಮಾರೋಪ**

ಡಾ. ಡಿ. ಎಲ್. ನರಸಿಂಹಾಚಾರ್ ಅವರದು ಬಹುಮುಖವಾದ ಪ್ರತಿಭೆ. ಅಧ್ಯಾಪಕರಾಗಿ - ಪ್ರಾಧ್ಯಾಪಕರಾಗಿ ಕಾಲೇಜು-ವಿಶ್ವವಿದ್ಯಾಲಯಗಳಲ್ಲಿ ಅವರು ಅನೇಕ ವಿದ್ಯಾರ್ಥಿಗಳಿಗೆ ಪಾಠ ಮಾಡಿದ್ದಾರೆ; ಮಾರ್ಗದರ್ಶನ ಮಾಡಿದ್ದಾರೆ. ಅವರ ಶಿಷ್ಯರ ಒಂದು ದೊಡ್ಡಬಳಗವೇ ಇದ್ದುದನ್ನು ಗಮನಿಸಬೇಕಾಗಿದೆ. ಕನ್ನಡ-ಇಂಗ್ಲಿಷ್-ಸಂಸ್ಕೃತ ಹೀಗೆ ಅನೇಕ ಭಾಷೆಗಳನ್ನು ಬಲ್ಲ ಡಿ. ಎಲ್. ಎನ್. ಅವರು ಒಬ್ಬ ಭಾಷಾ ವಿಜ್ಞಾನಿಯಾಗಿ ಸಲ್ಲಿಸಿದ ಸೇವೆಯನ್ನು ಮರೆಯುವಂತಿಲ್ಲ. ಪ್ರಸಿದ್ಧ ಸಂಶೋಧಕರಾಗಿ ಸಂಪಾದಕರಾಗಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅದರಲ್ಲಿಯೂ ಹಳಗನ್ನಡ ನಡುಗನ್ನಡ ಸಾಹಿತ್ಯಕ್ಕೆ ಅವರು ಅಮೂಲ್ಯ ಕೊಡುಗೆಯನ್ನಿತ್ತಿದ್ದಾರೆ. ಶ್ರೇಷ್ಠ ವಿದ್ವಾಂಸರಾಗಿ ಅವರು ಬಹುಮುಖ್ಯವಾದುದ್ದನ್ನು ಕೊಟ್ಟಿದ್ದಾರೆ. ಕನ್ನಡ ಭಾಷೆ, ವ್ಯಾಕರಣ, ನಿಘಂಟು, ಛಂದಸ್ಸು, ಗ್ರಂಥಸಂಪಾದನೆ, ಸಾಹಿತ್ಯ ಚರಿತ್ರೆ, ಪುಸ್ತಕ ವಿಮರ್ಶೆ ಹೀಗೆ ಹಲವು ಕ್ಷೇತ್ರಗಳಲ್ಲಿ ಸಮರ್ಪಣಾ ಭಾವದಿಂದ ಕೆಲಸ ಮಾಡಿದ ಡಿ. ಎಲ್. ಎನ್. ಅವರು ತಮ್ಮ ಸತತ ಶ್ರಮ ಹಾಗೂ ಅಧ್ಯನಗಳಿಂದ ಕನ್ನಡದ ಬುನಾದಿ ಕಟ್ಟಲು ಸಹಾಯಕರಾಗಿದ್ದಾರೆ. ಡಿ. ಎಲ್. ಎನ್. ಎಂದರೆ ಪಾಂಡಿತ್ಯ, ಪಾಂಡಿತ್ಯವೆಂದರೆ ಡಿ. ಎಲ್. ಎನ್. ಎನ್ನುವಷ್ಟರ ಮಟ್ಟಿಗೆ ಅವರು ಅಂದು ಅನಿವಾರ್ಯವಾಗಿದ್ದರು. ಜ್ಞಾನೋಪಾಸನೆಯೇ ಜೀವನದ ಧ್ಯೇಯವೆಂದು ತಿಳಿದಿದ್ದ ಅವರು ಕನ್ನಡಕ್ಕಾಗಿ ಬಹುವಿಧದಿಂದ ದುಡಿದಿದ್ದಾರೆ. ಬಿ. ಎಂ. ಶ್ರೀ ಯವರಂತಹ ಗುರುಗಳನ್ನು, ತೀ. ನಂ. ಶ್ರೀಯವರಂತಹ ಗೆಳೆಯರನ್ನು ಪಡೆದಿದ್ದ ಡಿ. ಎಲ್. ಎನ್. ಉನ್ನತವಾದ ಗುರುಪರಂಪರೆಯನ್ನು ನಿರ್ಮಿಸಿಹೋಗಿದ್ದಾರೆ. ಸುಮಾರು ನಲವತ್ತು ವರ್ಷಗಳಿಗೂ ಹೆಚ್ಚುಕಾಲ ಅವರು ಕನ್ನಡ ಭಾಷೆ- ಸಾಹಿತ್ಯದ ಏಳ್ಗೆಗಾಗಿ ಶ್ರಮಿಸಿದ್ದಾರೆ.

ಕನ್ನಡ ಗ್ರಂಥಸಂಪಾದನೆ, ಸಂಶೋಧನೆ, ಸಂಗ್ರಹಗಳಿಗೆ ಸಂಬಂಧಿಸಿದಂತೆ ನಮ್ಮಲ್ಲಿ ಮೊದಲು ಕೆಲಸ ಪ್ರಾರಂಭಿಸಿದವರು ಪಾಶ್ಚಾತ್ಯ ವಿದ್ವಾಂಸರು. ಮೆಕೆಂಝಿ, ಕಿಟ್ಟೆಲ್, ಪಾಲ್ ಮಾಸ್, ಫ್ಲೀಟ್, ರೈಸ್ ಈ ಮೊದಲಾದವರು ನಮ್ಮ ಸಾಹಿತ್ಯ ಸಂಸ್ಕೃತಿ ಶಾಸನ-ಗ್ರಂಥ ಸಂಪಾದನೆ- ಜಾನಪದ ಸಂಗ್ರಹ, ಪದಕೋಶಗಳತ್ತ ಮೊದಲು ನಮ್ಮ ಗಮನ ಸೆಳೆದವರಾಗಿದ್ದಾರೆ. ಇದೇ ದಾರಿಯಲ್ಲಿ ಮುಂದುವರಿದ ಕನ್ನಡದ ವಿದ್ವಾಂಸರಲ್ಲಿ ಡಿ. ಎಲ್. ಎನ್. ಅವರು ಪ್ರಮುಖರಾಗಿದ್ದಾರೆ. ಆರ್. ನರಸಿಂಹಾಚಾರ್ ಅವರಂಥವರು ಕವಿ ಚರಿತ್ರೆಯನ್ನು ರಚಿಸಿದರೆ, ಫ. ಗು. ಹಳಕಟ್ಟಿಯಂಥವರು ಶಿವಶರಣರ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಡಿ. ಎಲ್. ಎನ್. ಅವರಂಥವರು ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಅವರ "ಕನ್ನಡ ಗ್ರಂಥ ಸಂಪಾದನೆ" ಕೃತಿ ಈ ದೃಷ್ಟಿಯಿಂದ ಹೆಸರಿಸುವಂತಹದ್ದಾಗಿದೆ.

ಡಿ. ಎಲ್. ಎನ್. ಅವರ ಸಾಹಿತ್ಯ ಕೃಷಿಯನ್ನು ಗಮನಿಸಿದಾಗ ಅವರ ಪ್ರಮುಖ ಕೊಡುಗೆ ಗ್ರಂಥಸಂಪಾದನೆಯದ್ದೇ ಆಗಿದೆ. ಅನೇಕ ಹಳಗನ್ನಡ-ನಡುಗನ್ನಡದ ಹಸ್ತಪ್ರತಿಗಳನ್ನು ಓಲೆ ಪ್ರತಿಗಳನ್ನು ಅವರು ವೈಜ್ಞಾನಿಕವಾಗಿ ಸಂಪಾದಿಸಿ, ಶುದ್ಧಪಾಠಗಳನ್ನು ನಿರ್ಣಯಿಸಿ, ವಿವರವಾದ ಪೀಠಿಕೆಗಳೊಂದಿಗೆ ಪ್ರಕಟಿಸಿದ್ದಾರೆ. ಹೀಗಾಗಿ ಗ್ರಂಥಸಂಪಾದನೆಗಾಗಿ ಅವರಿಂದ ಸಂದ ಸೇವೆಯನ್ನು ಮರೆಯುವಂತಿಲ್ಲ. ಆದರೆ ಸಂಶೋಧನೆ ಹಾಗೂ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದಂತೆ ಅವರ ನಿರ್ಣಯಗಳನ್ನು ಅನೇಕ ಸಂದರ್ಭಗಳಲ್ಲಿ ಪ್ರಶ್ನಿಸಬೇಕಾಗುತ್ತದೆ.

ಸಂಶೋಧನೆಯ ಕ್ರಿಯೆಯಲ್ಲಿ ಅವರು ಇದುವರೆಗೆ ಉಪಲಬ್ಧವಿರುವ ಎಲ್ಲ ಮಾಹಿತಿಗಳನ್ನು ಸಂಗ್ರಹಿಸುತ್ತಾರೆ. ತಮ್ಮ ಸತತ ಶ್ರಮ ಹಾಗೂ ಪಾಂಡಿತ್ಯದಿಂದ ಅಚ್ಚುಕಟ್ಟಾಗಿ ಸಂಯೋಜಿಸುತ್ತಾರೆ. ಆದರೆ ಆ ಮೂಲಕ ಅವರು ಹೊಸದೇನನ್ನೂ ಹೇಳದೆ ಇದ್ದ ವಿಷಯವನ್ನೇ ತೇಲಿಸಿ ಬಿಟ್ಟುಬಿಡುತ್ತಾರೆ. ಅನೇಕ ಪ್ರಾಚೀನ ಕವಿಗಳ ಕಾಲ ಮತ-ಪ್ರದೇಶಗಳನ್ನು ಹೇಳುವಾಗ ಇವರ ಸಂಶೋಧನೆ, ಅರಕ್ಕೇರದ ಮೂರಕ್ಕಿಳಿಯದ ಯಥಾಸ್ಥಿತಿವಾದವನ್ನು ಮುಂದುವರಿಸುತ್ತದೆ. ಕನ್ನಡದ ಸಂಶೋಧಕ ಶಂ. ಬಾ. ಜೋಷಿಯವರಂತೆ, ಇತ್ತೀಚಿನ ದಶಕಗಳಲ್ಲಿ ಪ್ರಮುಖ ಸಂಶೋಧಕರಾಗಿ ಬೆಳೆದ ಚಿದಾನಂದ ಮೂರ್ತಿ ಹಾಗೂ ಎಂ. ಎಂ. ಕಲಬುರ್ಗಿಯವರ ಹಾಗೆ ಡಿ.ಎಲ್. ಎನ್ ಅವರಲ್ಲಿ ಸಾಂಸ್ಕೃತಿಕ ಸಂಶೋಧನೆ ಸಿಗುವುದು ಬಹಳ ಕಡಿಮೆ.

ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದಂತೆ ಡಿ. ಎಲ್. ಎನ್. ಕೆಲಸ ಮಾಡಿದ್ದಾರೆ. ಹೊಸಗನ್ನಡ ಸಾಹಿತ್ಯ ಕುರಿತು ಅಷ್ಟಾಗಿ ಆಸಕ್ತಿ ವಹಿಸದ ಡಿ. ಎಲ್. ಎನ್. ಅವರ ಪುಸ್ತ ವಿಮರ್ಶೆಯ ಕಾರ್ಯ ಕೇವಲ ಪರಿಚಯ ಹಾಗೂ ವರ್ಣನಾತ್ಮಕ ಬರೆವಣಿಗೆಯ ಹಂತದಲ್ಲೇ ನಿಂತು ಬಿಡುತ್ತದೆ. ತೌಲನಿಕ ವಿವೇಚನೆಯಾಗಲಿ ವಸ್ತುನಿಷ್ಠಮೌಲ್ಯ ನಿರ್ಣಯವಾಗಲಿ ಸಾಹಿತ್ಯ ವಿಮರ್ಶೆಯ ಹೊಸಸಾಧ್ಯತೆಗಳಾಗಲಿ ಅವರಲ್ಲಿ ಕಾಣಸಿಗುವುದಿಲ್ಲ. ಸಂಸ್ಕೃತಿ ನಿಷ್ಠ ವಿಮರ್ಶೆಗೆ ಸಾಹಿತ್ಯೇತರ ಶಿಸ್ತುಗಳೂ ಮುಖ್ಯವಾಗುತ್ತವೆ. ಹೀಗಾಗಿ ಡಿ. ಎಲ್. ಎನ್. ಅವರನ್ನು ಒಬ್ಬ ವಿಮರ್ಶಕರೆಂದು ಒಪ್ಪುವುದು ಕಷ್ಟವಾಗುತ್ತದೆ. ಆದರೆ ಅಂದಿನ ಸಂದರ್ಭದ ವಿದ್ವಾಂಸರಂತೆ ಡಿ. ಎಲ್. ಎನ್. ಕೂಡಾ ಕಥಾಸಾರವನ್ನು ವಿವರಿಸಿ ಹೇಳುವಲ್ಲಿ, ಪಾತ್ರಗಳನ್ನು ವಿಶ್ಲೇಷಣೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಎಲ್ಲ ಕ್ಷೇತ್ರಗಳಲ್ಲಿ ಎಲ್ಲವನ್ನೂ ಒಬ್ಬ ವಿದ್ವಾಂಸರಿಂದ ಪಡೆಯಲಿಕ್ಕಾಗುವುದಿಲ್ಲ. ಹೀಗಾಗಿ ಡಿ. ಎಲ್. ಎನ್. ಅವರ ಕೊಡುಗೆ ಸಂಶೋಧನೆ ಹಾಗೂ ವಿಮರ್ಶೆಯ ಕ್ಷೇತ್ರಕ್ಕೆ ಅಷ್ಟಾಗಿ ದೊರೆಯದಿದ್ದರೂ ಗ್ರಂಥಸಂಪಾದನೆ ಹಾಗೂ ಭಾಷ್ಯಾವಿಜ್ಞಾನಕ್ಕೆ ಸಂಬಂಧಿಸಿದಂತೆ ಅನನ್ಯವಾಗಿದೆ. ಡಿ. ಎಲ್. ಎನ್. ಅವರಂತಹ ಪ್ರತಿಭಾವಂತ ಪಂಡಿತರನ್ನು ನಾವಿಂದು ಕೇವಲ ವೈಭವೀಕರಿಸದೆ ವಸ್ತುನಿಷ್ಠವಾಗಿ ಅವರ ಸಾಧ್ಯತೆಗಳನ್ನು ಗುರುತಿಸಿ ಅವರ ಮಿತಿಗಳನ್ನು ದಾಟಬೇಕಾಗಿದೆ. ಈ ನಿಟ್ಟಿನಲ್ಲಿ ಡಿ. ಎಲ್. ಎನ್. ಅವರ ಕೃತಿಗಳ ಬಗೆಗೆ ವಿಶೇಷ ಅಧ್ಯಯನ ನಡೆಯುವುದು ಅಗತ್ಯವಾಗಿದೆ. ಕನ್ನಡಕ್ಕಾಗಿ ದುಡಿದ ಇಂತಹ ಹಿರಿಯ ವಿದ್ವಾಂಸರನ್ನು ಗೌರವಿಸುತ್ತಲೇ, ನಮ್ಮ ಮುಂದಿನ ದಾರಿಗಳನ್ನು ಕಂಡುಕೊಳ್ಳುವುದು ಇಂದಿನ ಅನಿವಾರ್ಯತೆಯಾಗಿದೆ.

# ಮಾಸ್ತಿಯುವರ ಕಾವ್ಯ

ಡಾ. ಬಸವರಾಜ ಸಬರದ

***ಪೀಠಿಕೆ :***

ನವವಸಾಹತುಶಾಹಿ ಆಕ್ರಮಣದ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯವನ್ನು ಹೊಸರೀತಿಯಲ್ಲಿ ಓದುವದು ಇಂದಿನ ಅಗತ್ಯವಾಗಿದೆ. ಈ ದೃಷ್ಟಿಯಿಂದ ನವೋದಯ ಕಾವ್ಯವನ್ನು ದೇಶೀಯ ನೆಲೆಗಳ ಮೂಲಕ ಅರ್ಥೈಸಿಕೊಳ್ಳುತ್ತ, ದೇಶೀಯ ಸಾಧ್ಯತೆಗಳನ್ನು ವಿಸ್ತರಿಸಿಕೊಳ್ಳುವ ಪ್ರಯತ್ನವು ಹೆಚ್ಚು ಪ್ರಸ್ತುತವೆನಿಸುತ್ತದೆ. ಈ ದೃಷ್ಟಿಯಿಂದ, ನವೋದಯ ಸಂದರ್ಭದ ಪ್ರಮುಖ ಕವಿಗಳಲ್ಲೊಬ್ಬರಾದ ಮಾಸ್ತಿಯುವರ ಕಾವ್ಯವನ್ನಿಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

'ಶ್ರೀನಿವಾಸ' ಕಾವ್ಯನಾಮದಲ್ಲಿ, ಕನ್ನಡ ಸಾಹಿತ್ಯಕ್ಕೆ ಮಹತ್ವದ ಕೃತಿಗಳನ್ನು ನೀಡಿದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಕಾವ್ಯವು ಬಹುಮುಖಿ ಸಂಸ್ಕೃತಿಯ ಬಹುಮುಖ್ಯ ನೆಲೆಗಳನ್ನು ತೆರೆದಿಡುತ್ತದೆ. ಹೀಗಾಗಿ ಮಾಸ್ತಿಯವರಂತಹ ಕವಿಗಳು ಇಂದಿನ ಸಂದರ್ಭದಲ್ಲಿ ಹೆಚ್ಚಿನ ಕುತೂಹಲವನ್ನುಂಟುಮಾಡುತ್ತಾರೆ.

ಸಣ್ಣಕತೆ-ಕಾದಂಬರಿ ಪ್ರಕಾರಗಳಲ್ಲಿ ಗಮನಾರ್ಹ ಕೊಡುಗೆಯನ್ನು ನೀಡಿತುವ ಮಾಸ್ತಿಯವರ ಕಾವ್ಯವೂ ಕೂಡ ಕಥಾ ಪ್ರಧಾನವಾಗಿದೆ. ಪ್ರಕಟವಾಗಿರುವ ಹದಿನೇಳು ಕವನ ಸಂಕಲನಗಳಲ್ಲಿ ಬಹುಸಂಖ್ಯೆಯ ಕವನಗಳೆಲ್ಲಾ ಕಥನಕವನಗಳೇ ಆಗಿವೆ. ೧೯೨೨ ರಲ್ಲಿ ಅವರ ಪ್ರಥಮ ಕವನ ಸಂಗ್ರಹ 'ಬಿನ್ನಹ' ಪ್ರಕಟವಾಯಿತು. ೧೯೫೩ರಲ್ಲಿ 'ನವರಾತ್ರಿ' ಕವನ ಸಂಗ್ರಹದ ಐದನೆಯ ಭಾಗವು ಪ್ರಕಟವಾಯಿತು. ಈ ನಡುವೆ ಅರುಣ, ತಾವರೆ, ಚೆಲುವು, ಮಲಾರ, ಗೌಡರಮಲ್ಲಿ, ರಾಮನವಮಿ, ಮೂಕನಮಕ್ಕಳು, ಸುನೀತಾ, ಮನವಿ, ಸಂಕ್ರಾಂತಿ, ಶ್ರೀರಾಮ ಪಟ್ಟಾಭಿಷೇಕ ಹಾಗೂ ನವರಾತ್ರಿ ಸಂಕಲನದ ನಾಲ್ಕು ಭಾಗಗಳು ಪ್ರಕಟವಾದವು. ಹೀಗೆ ಮೂವತ್ತೊಂದು ವರ್ಷಗಳ ಅವಧಿಯಲ್ಲಿ ಮಾಸ್ತಿಯವರ ಹದಿನೇಳು ಕವನ ಸಂಕಲನಗಳು ಪ್ರಕಟವಾದವು.

**ವರ್ಗೀಕರಣ**

ಅಧ್ಯಯನದ ಅನುಕೂಲಕ್ಕಾಗಿ ಮಾಸ್ತಿಯವರ ಕಾವ್ಯವನ್ನು ನಾಲ್ಕು ಭಾಗಗಳಲ್ಲಿ ವಿಂಗಡಿಸಬಹುದಾಗಿದೆ. ಭಾವಗೀತ, ಗೇಯಗೀತ, ಕಥನಕಾವ್ಯ ಹಾಗೂ ಖಂಡಕಾವ್ಯ. ಇವು ಇವರ ಕಾವ್ಯದ ಪ್ರಮುಖ ಪ್ರಕಾರಗಳಾಗಿವೆ.

ಭಾವಗೀತದಲ್ಲಿ ಬರುವ ಅದರ ಅನೇಕ ಉಪಪ್ರಕಾರಗಳಲ್ಲಿ ಮಾಸ್ತಿ ಕೃಷಿ ಮಾಡಿದ್ದಾರೆ. ಭಾವ ಕವನ, ಸುನೀತ, ಪ್ರಗಾಥ, ಶೋಕಗೀತ, ಮುಕ್ತ ಹೀಗೆ ಅನೇಕ ಛಂದೋವೈವಿಧ್ಯಗಳನ್ನು ಅವರ ಕಾವ್ಯದಲ್ಲಿ ಕಾಣಬಹುದಾಗಿದೆ. ತುಂಬಾ ಸರಳವಾದ

ನುಡಿಗಟ್ಟಿನಲ್ಲಿ ಮೈದಳೆಯುವ ಇವರ ಭಾವಗೀತೆಗಳು ಪ್ರಕೃತಿ ವರ್ಣನೆ, ದೇಶಪ್ರೇಮ, ನಾಡು-ನುಡಿಯ ಅಭಿಮಾನವನ್ನು ಮೂಡಿಸುವಲ್ಲಿ ಯಶಸ್ವಿಯಾದರೂ ಕಾವ್ಯಸತ್ವ ಇಲ್ಲಿ ತೆಳುವಾಗಿದೆಯೆನಿಸುತ್ತದೆ. ಕುವೆಂಪು - ಬೇಂದ್ರೆ ಅವರ ಭಾವಗೀತೆಗಳಿಗೆ ಹೋಲಿಸಿದರೆ, ಇವರ ಭಾವಗೀತೆಗಳು ತುಂಬಾ ಸಪ್ಪೆಯಾಗಿ ಕಾಣಿಸುತ್ತವೆ. 'ಅರುಣ' ಕವನ ಸಂಕಲನದಲ್ಲಿ ಪ್ರಕಟವಾಗಿರುವ 'ಹರಿದಾಸನ ಪದಗಳು' ಹೆಸರಿನಲ್ಲಿರುವ ತ್ರಿಪದಿಗಳು ತುಂಬಾ ವಾಚ್ಯವಾಗಿವೆ. ಮುಕ್ತಕಗಳಲ್ಲಿರಬಹುದಾದ ಸಂಕೀರ್ಣತೆ, ಕುತೂಹಲ, ಧ್ವನಿ ಇವು ಯಾವುವೂ ಇಲ್ಲಿ ಕಾಣಿಸುವುದಿಲ್ಲ. ಆದಿಪ್ರಾಸ-ಅನುಪ್ರಾಸಗಳ ಜೋಡಣೆಯಿಂದ ಓದಿಸಿಕೊಂಡು ಹೋಗುವ ಈ ತ್ರಿಪದಿಗಳು ನೀತಿ ಮಾತುಗಳನ್ನು ಹೇಳುತ್ತಾ ಹೋಗುತ್ತವೆ. 'ಚೆಲುವು' ಕವನ ಸಂಕಲನದಲ್ಲಿ ಬರುವ "ಮುರಿದು ಬಿದ್ದ ವೀರಕಲ್ಲು" ಶೋಕಗೀತ ಮಾತ್ರ ಗಮನಸೆಳೆಯುತ್ತದೆ. ಮೃತ್ಯುವಿನಾಚೆಗಿನ ವೈಚಿತ್ರ್ಯಗಳನ್ನು ಕವಿ ಇಲ್ಲಿ ಕಾಣಿಸಿದ್ದಾನೆ. ಮಡಿದ ವೀರನ ತಾಯಿ ಓಡೋಡಿಬಂದು "ದೇವರೆ ಇವನನುಳಿಸು ಸಾವೆ ನನ್ನ ಕೊಳು" ಎಂದು ಅಂಗಲಾಚಿ ಬೇಡಿಕೊಳ್ಳುವ ಸ್ಥಿತಿ ಕರುಣಾಜನಕವಾಗಿದೆ. ಎಳೆಗೂಸಿನೊಂದಿಗೆ ಬಂದು, ವೀರನ ಮುಂದಲೆಯನ್ನು ತನ್ನ ಮಡಿಲೊಳಗಿಟ್ಟುಕೊಂಡು ದುಃಖಿಸುವ ಮಡದಿಯ ಚಿತ್ರ ಮನಮಿಡಿಯುವಂತಿದೆ. ಹೀಗೆ ಮಾಸ್ತಿಯವರ ಪ್ರಕೃತಿಗೀತೆಗಳು ರಸಾನಂದವನ್ನುಂಟು ಮಾಡಿದರೆ, ಶೋಕಗೀತೆಗಳು ತೀವ್ರವಾದ ಪರಿಣಾಮವನ್ನುಂಟು ಮಾಡುತ್ತವೆ. ಆದರೆ ತನ್ನ ಅಂತಃಸತ್ವದಿಂದ ಗಟ್ಟಿಯಾಗಿ ನೆಲೆನಿಲ್ಲಬಲ್ಲ ಭಾವಗೀತೆಗಳು ಇವರಲ್ಲಿ ತುಂಬಾ ವಿರಳವಾಗಿವೆ.

ಮಾಸ್ತಿಯವರ ಗೇಯಗೀತಗಳು ಭಕ್ತಿಪ್ರಧಾನವಾಗಿವೆ. ಶರಣರ ಸ್ವರವಚನಗಳು ಹಾಗೂ ದಾಸರ ಕೀರ್ತನೆಗಳು ಇಲ್ಲಿ ಪ್ರೇರಣೆಯಾಗಿ ನಿಂತಿವೆ. ನವೋದಯ ಕಾವ್ಯದ ಅನೇಕ ಕಾವ್ಯರೂಪಗಳು ಪಾಶ್ಚಾತ್ಯ ಸಾಹಿತ್ಯದಿಂದ ಪ್ರೇರಣೆ ಪಡೆದಿದ್ದರೆ, ಗೇಯಗೀತಗಳುಸಂಕಲನಗಳೇ ಆಗಿವೆ. ಸಂಕ್ರಾಂತಿ ಕವನ ಮಾತ್ರ ಕನ್ನಡ ಕಾವ್ಯ ಪರಂಪರೆಯ ಮುಂದುವರಿಕೆಯಾಗಿ ಬೆಳೆದುಬಂದಿವೆ. ಮಾಸ್ತಿಯವರ ಗೇಯಗೀತಗಳು ಇದಕ್ಕೆ ಹೊರತಾಗಿಲ್ಲವೆನ್ನಬಹುದು. ಇವರ 'ಬಿನ್ನಹ' ಹಾಗೂ 'ಮನವಿ' ಇವೆರಡೂ ಗೇಯಗೀತಗಳ ಸಂಕಲನಗಳೇ ಆಗಿವೆ. ಸಂಕ್ರಾಂತಿ ಕವನ ಸಂಕಲನದಲ್ಲಿಯೂ ಕೆಲವು ಗೇಯಗೀತಗಳಿವೆ. ನೂರಾರು ಗೇಯಗೀತಗಳನ್ನು ರಚಿಸಿರುವ ಮಾಸ್ತಿಯವರ ಗೇಯಗೀತಗಳ ಮೇಲೆ ಪುರಂದರದಾಸರ ನೇರ ಪ್ರಭಾವವನ್ನು ಕಾಣಬಹುದಾಗಿದೆ. ಕೀರ್ತನೆಗಳಲ್ಲಿ ಪಲ್ಲವಿ, ಅನುಪಲ್ಲವಿ ಮಾಡುವ ಕಾರ್ಯವನ್ನು ಮಾಸ್ತಿಯವರ ಗೇಯಗೀತಗಳಲ್ಲಿ ಬರುವ ಪ್ರಾರಂಭಿಕ ಚರಣಗಳು ಮಾಡುತ್ತವೆ. ಕೆಲವು ಗೇಯಗೀತಗಳ ಮೇಲೆ ನಿಜಗುಣ ಶಿವಯೋಗಿಗಳ ಸ್ವರವಚನಗಳ ಪ್ರಭಾವವಿದೆ. ರಾಗಕ್ಕೆ ಹೊಂದಿಸಿ ಹಾಡಬಹುದಾದ ಈ ಗೇಯಗೀತಗಳಿಗೆ ಮಾಸ್ತಿಯವರೇ ರಾಗಗಳನ್ನು ಸೂಚಿಸಿದ್ದಾರೆ. ಆಧುನಿಕ ಸಂದರ್ಭದಲ್ಲಿ ಹೀಗೆ ರಾಗಗಳನ್ನು ಸೂಚಿಸಿ ಗೇಯಗೀತಗಳನ್ನು ಬರೆದವರಲ್ಲಿ ಮಾಸ್ತಿಯವರೇ ಮೊದಲಿಗರಾಗಿದ್ದಾರೆ.

ಕಷ್ಟಕಾರ್ಪಣ್ಯಗಳನ್ನೇ ಸ್ವಾಗತಿಸಿ ಅವುಗಳನ್ನು ಎದುರಿಸಲು ಸಿದ್ಧನಾಗುವ ಕವಿ:

"ಕಳುಹಿಸು ಹರಿಯೇ ಮೋಡಗಳನು
ಮಳೆಬರುವುದೋ ಸಿಡಿಲೆ ಎರಗುವುದೊ
ತಿಳಿಯೆ ನಾನು, ಅದು ಆದುದಾಗಲಿ
ಕಳುಹಿಸಯ್ಯ ಹರಿ ಮಳೆಯ ಚಿಹ್ನೆಯನು'

–("ಬಿನ್ನಹ" : ಸಂದೇಹ, ಪು. ೭)

ಎಂದು ಸತ್ವ ಪರೀಕ್ಷೆಗೊಳಗಾಗುತ್ತಾನೆ. ಭಗವಂತನಲ್ಲಿ ಭಕ್ತನು ಸಮರ್ಪಣಾ ಭಾವದಿಂದ ಬೇಡಿಕೊಳ್ಳುವ ಭಕ್ತಿಭಾವ ಇಲ್ಲಿದೆ. ಪುರಂದರ ದಾಸರ ಕೀರ್ತನೆಗಳಲ್ಲಿರುವ ವಿಡಂಬನೆಯಾಗಲಿ, ನಿಜಗುಣರಲ್ಲಿ ಕಾಣುವ ಗಹನತತ್ವವಾಗಲಿ ಮಾಸ್ತಿಯವರ ಗೇಯಗೀತಗಳಲ್ಲಿ ಕಾಣಿಸುವುದಿಲ್ಲ. ಭಕ್ತಿಯ ಆರ್ತತೆಯೇ ಅವರ ಗೇಯಗೀತಗಳ ಪ್ರಧಾನ ಕಾಳಜಿಯಾಗಿದೆ.

ನಮ್ಮ ಪ್ರಾಚೀನ ಕಥನ ಶೈಲಿಯ ಮೇಲೆ ಆಂಗ್ಲರ ಕಥನಕವನವನ್ನು ಕಸಿಕಟ್ಟಿ ನವೋದಯ ಕವಿಗಳು "ಕಥನಕವನ" ವೆಂಬ ಹೊಸ ರೂಪವನ್ನು ಬೆಳೆಸಿದರು. ಕನ್ನಡ ಕಾವ್ಯಕ್ಷೇತ್ರದಲ್ಲಿ ಕಥನಕವನಗಳಿಗೆ ಸಂಬಂಧಿಸಿದಂತೆ ಮಾಸ್ತಿಯವರದು ವಿಶಿಷ್ಟರೀತಿಯ ಕೊಡುಗೆಯಾಗಿದೆ. ಮಾಸ್ತಿಯವರ ಸಮಕಾಲೀನರಾಗಿದ್ದ ಪಂಜೆ, ಗೋವಿಂದಪೈ ಅವರ ಕಥನಕವನಗಳಿಗೆ, ಮಾಸ್ತಿಯವರ ಕಥನಕವನಗಳನ್ನು ಹೋಲಿಸಿದಾಗ, ಮಾಸ್ತಿಕಥನಕಾವ್ಯದ ವೈಶಿಷ್ಟ್ಯತೆ ಎದ್ದುಕಾಣುತ್ತದೆ. ಕಥನಕಾವ್ಯದ ಅನನ್ಯತೆಯನ್ನು ಅದರ ಆಳವಿಸ್ತಾರಗಳನ್ನು ಕಾಣಬೇಕಾದರೆ, ಮಾಸ್ತಿಯವರ ಕಥನ ಕಾವ್ಯವೇ ಪ್ರಮುಖವಾಗುತ್ತದೆ.

ಇಂಗ್ಲಿಷ್‌ನಲ್ಲಿ ಹದಿನಾಲ್ಕನೆಯ ಶತಮಾನದ ಕವಿ ಜೆಫ್ರಿ ಛಾಸರ್‌ನಿಂದ ಕಥನ ಕಾವ್ಯ ಪ್ರಾರಂಭವಾಯಿತು. ಛಾಸರ್‌ನ "ಕ್ಯಾಂಟರ್ ಬರಿ ಟೇಲ್ಸ್‌ಗಳು" ಈ ದೃಷ್ಟಿಯಿಂದ ಗಮನಾರ್ಹವಾಗಿವೆ. ಮಾಸ್ತಿಯವರು ರಚಿಸಿರುವ "ನವರಾತ್ರಿ" ಕವನ ಸಂಕಲನದ ಐದು ಭಾಗಗಳು ಕಥನಕವನಗಳೇ ಆಗಿವೆ. ಈ ಕಥನ ಕಾವ್ಯದ ಮೇಲೆ ಛಾಸರ್‌ನ ಪ್ರಭಾವವನ್ನು ಕಾಣಬಹುದಾಗಿದೆ. ಕಥೆಹೇಳುವ ಛಾಸರ್‌ನ ತಂತ್ರವನ್ನು ಮಾಸ್ತಿಯವರು ಈ ಐದೂ ಸಂಕಲನದ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ. ಮೊದಲು ಪೀಠಿಕೆಹಾಕಿ ಆಮೇಲೆ ಒಬ್ಬೊಬ್ಬರು ಕಥೆ ಹೇಳುವ ತಂತ್ರ ಹಾಗೂ ಹೇಳಿದ ಕಥೆಗಳ ಮೇಲೆ ಟೀಕೆ ಪ್ರಾರಂಭಿಸುವ ವಿಧಾನ ಇವೆಲ್ಲಾ ಛಾಸರ್‌ನಿಂದಲೇ ಬಂದವುಗಳಾಗಿವೆ. ಆದರೆ ಛಾಸರ್‌ನ ವ್ಯಕ್ತಿಗಳು ಆ ಕಾಲದ ಇಂಗ್ಲೆಂಡಿನ ಎಲ್ಲ ವರ್ಗವನ್ನೂ ಪ್ರತಿನಿಧಿಸಿದರೆ, ಮಾಸ್ತಿಯವರ 'ನವರಾತ್ರಿಯಲ್ಲಿ' ಬರುವ ಕಥಾನಿರೂಪಕರು ಒಂದೇ ವರ್ಗಕ್ಕೆ ಸೇರಿದವರಾಗಿದ್ದಾರೆ. ಹೀಗಾಗಿ ಛಾಸರ್‌ನ ಕಥನ ಕವನಗಳಲ್ಲಿ ಕಾಣುವ ವೈವಿಧ್ಯಮಯ ಅನುಭವಗಳು, ಮಾಸ್ತಿಯವರ ಕಥನ ಕವನಗಳಲ್ಲಿ ಕಾಣಿಸುವುದಿಲ್ಲ. ಆದರೆ ಮಾಸ್ತಿಯವರ ಕಥೆ ಹೇಳುವ ರೀತಿ ತುಂಬಾ ಕುತೂಹಲಕಾರಿಯಾಗಿದೆ. ಅದರ ಸಣ್ಣಕಥೆಗಳಿಗೂ ಮತ್ತು ಅವರ ಕಥನಕವನಗಳಿಗೂ ಹೆಚ್ಚಿನ ವ್ಯತ್ಯಾಸ ಕಾಣಿಸುವುದಿಲ್ಲ.

'ನವರಾತ್ರಿಯ' ಐದು ಸಂಕಲನಗಳಲ್ಲಿ ಅನೇಕ ಕಥನಕವನಗಳು ಹೆಣೆದುಕೊಂಡಿವೆ.

'ಯದುವಿಜಯ'ನ ಕಥೆಯನ್ನು ಹಿರಿಯಣ್ಣ ಹೇಳಿದರೆ, 'ಸಮಾಧಿಯ ಸತ್ವ' ದ ಕಥೆಯನ್ನು ಡಾಕ್ಟರು ಹೇಳುತ್ತಾರೆ. ಇದು ಅಮೇರಿಕಾದ ಇಂಗ ರಸಾಲನ ಕಥೆಯಾಗಿದೆ. 'ನಾರದರ ಅನುಭವ' ಕಥೆಯನ್ನು ಸುಬ್ಬಯ್ಯ ಹೇಳಿದರೆ, 'ಅಪರಂಜಿ ಆರಿಗ' ಕಥೆಯನ್ನು ಕೌಶಿಕ-ಹೇಳುತ್ತಾನೆ. 'ಜೀನಡ್ ಆರ್ಕ್' ಸೀತಣ್ಣ ಹೇಳುವ ಫ್ರಾನ್ಸ್ ದೇಶದ ಕಥೆಯಾದರೆ, 'ವಚ್ಚರೋವಚ್ಚಲೋ' ದೀಕ್ಷಿತ ಹೇಳಿದ ಕಥೆಯಾಗಿದೆ. ''ರಾಮಪ್ರಿಯಉದನ್ತ' ಕಥೆಯನ್ನು ರಾಜಣ್ಣ ಹೇಳಿದರೆ, 'ನಾಮಮಹಿಮೆ' ಕಥೆಯನ್ನು ದತ್ತೂಜಿ ಹೇಳಿದ್ದಾರೆ. 'ಕಪ್ಪೆ ಚೆನ್ನಿಗ ಮೂರ್ತಿ' ಕಥೆಯನ್ನು ಕೃಷ್ಣಮೂರ್ತಿ ಹೇಳಿದರೆ, 'ಮುಸಿಲಮ್ಮ' ಕಥೆ ಜಾನಪದದಿಂದ ಮೂಡಿಬಂದಿದೆ. ಇಲ್ಲಿಯ ಕಥನಕವನಗಳಿಗೆ ಒಂದು ಚೌಕಟ್ಟು ಇದೆ. ನವರಾತ್ರಿಯ ಹಬ್ಬ ಮೈಸೂರಿನಲ್ಲಿ ಸಂಭ್ರಮದಿಂದ ನಡೆಯುತ್ತದೆ. ಈ ಹಬ್ಬದಲ್ಲಿ ಹದಿನಾರು ಜನ ಸ್ನೇಹಿತರು ಹೇಳಿದ ಕಥೆಗಳು ಇಲ್ಲಿವೆ. ಈ ಸ್ನೇಹಿತರಲ್ಲಿ ಹಿರಿಯಣ್ಣ ಬಿ. ಎಂ. ಶ್ರೀ. ಡಾಕ್ಟರು-ಸುಬ್ಬರಾಯರು, ದತ್ತೋಜಿ-ಬೇಂದ್ರೆ, ಕೌಶಿಕರು-ರಾಘವಾಚಾರ್ಯ, ಸೀತಣ್ಣ-ವಿ. ಸೀ. ವೆಂಕಪ್ಪ- ವೆಂಕಣ್ಣಯ್ಯ, ರಾಜಣ್ಣ-ರಾಜರತ್ನಂ ಎಂದು ಗುರುತಿಸುತ್ತಾ ಹೋಗಬಹುದಾಗಿದೆ. ಪೌರಾಣಿಕ, ಐತಿಹಾಸಿಕ, ಗ್ರೀಕ್ ಪುರಾಣದ ಮೂಲ, ಜಾನಪದದ ಮೂಲ ಹೀಗೆ ವಿವಿಧ ವಸ್ತುಗಳನ್ನೊಳಗೊಂಡ ಕಥೆಗಳು ಇಲ್ಲಿವೆ.

ಈ ಕಥನ ಕವನಗಳಲ್ಲಿ ಕಾವ್ಯಾಂಶಕ್ಕಿಂತಲೂ ಕಥೆಗೆ ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಹೀಗಾಗಿ ಕಾವ್ಯದ ದೃಷ್ಟಿಯಿಂದ ಈ ಕಥನ ಕವನಗಳಿಗೆ ತನ್ನದೇ ಆದ ಮಿತಿಯುಂಟಾಗಿದೆಯೆನ್ನಬಹುದು. ಕಥಾವಸ್ತುವಿನಲ್ಲಿ ವೈವಿಧ್ಯತೆ ಇದೆಯೆಂದೆನಿಸಿದರೂ ಅನುಭವದ ದೃಷ್ಟಿಯಿಂದ ಏಕತಾನತೆ ಕಂಡುಬರುತ್ತದೆ. ಭಾಸರ್‌ನ ಜೀವಂತಿಕೆ ಇಲ್ಲಿಯ ಕಥೆಗಳಲ್ಲಿಲ್ಲವಾದರೂ, ಜನಬಳಕೆಯಲ್ಲಿದ್ದ ಅನೇಕ ಕಥೆಗಳು ಇಲ್ಲಿ ರಂಜಕವಾಗಿ ಮೂಡಿಬಂದಿವೆ.

'ಯದುರಾಯ ವಿಜಯ' ಕಥೆಯಲ್ಲಿ ಬರುವ ರಾಜಕುಮಾರಿ ದೇವಾಂಬಳ ಪಾತ್ರದಲ್ಲಿ ಬೆಳವಣಿಗೆಯನ್ನು ಕಂಡರೆ, 'ಸಮಾಧಿಯ ಸತ್ವ' ಕಥೆಯಲ್ಲಿ ತಿಳಿ ಹಾಸ್ಯವಿದೆ. ಸತ್ತ ಕತ್ತೆಯನ್ನೇ ಸಮಾಧಿ ಮಾಡಿ ಪೂಜಿಸುವ ಗುರು-ಶಿಷ್ಯರ ಕಥೆ ಇಲ್ಲಿ ರಂಜಕವಾಗಿ ಮೂಡಿಬಂದಿದೆ. 'ಸೋಜಿಗದ ಹೊಳಲು' ಮಾನವಾತೀತ ಅಂಶವನ್ನು ಬಳಸಿಕೊಂಡು ಬೆಳೆದರ್ರೆ, ಭಕ್ತಿಮುಖ್ಯವೆಂಬ ಸಂಗತಿಯನ್ನು 'ವಚ್ಚರೋ ವಚ್ಚಲೋ' ಕಥೆ ವಿಸ್ತರಿಸಿಕೊಳ್ಳುತ್ತದೆ.

'ದುರ್ಗದ ಅರ್ಚಕ' 'ವೀರಲಕ್ಷ್ಮಮ್ಮ' 'ದೇಶಾಚಾರ' 'ಸಿದ್ಧರಕಿನ್ನರಿ' 'ಕುರುಬ ಹಂಪಣ್ಣ' ಈ ಮುಂತಾದ ಕಥನ ಕವನಗಳ ಕಾವ್ಯವಸ್ತು ಕುತೂಹಲಕಾರಿಯಾಗಿದೆ. ಮಾಸ್ತಿಯವರ ಕಥನ ಕವನಗಳಲ್ಲಿ 'ಮದಲಿಂಗನ ಕಣಿವೆ' 'ಚಿಕ್ಕಮಲ್ಲಮ್ಮ', 'ನೀಲಗಾರ ಮಾದ' ದಂತಹ ಕಥನಕವನಗಳು ಆಕರ್ಷಕವಾಗಿವೆ.

'ನವರಾತ್ರಿ' ಸಂಕಲನಗಳು ಪ್ರಕಟವಾಗುವ ಮೊದಲೇ ಮಾಸ್ತಿ ಅನೇಕ ಕಥನಕವನಗಳನ್ನು ರಚಿಸಿದ್ದರು. ೧೯೪೦ರಲ್ಲಿ ಪ್ರಕಟವಾದ 'ಗೌಡರಮಲ್ಲಿ', ೧೯೪೧ ರಲ್ಲಿ ಬಂದ 'ರಾಮನವಮಿ' ಹಾಗೂ 'ಮೂಕನಮಕ್ಕಳು' ಈ ಮೊದಲಾದ ಕಥನ

ಕವನಗಳು ವಸ್ತು ಹಾಗೂ ಅಭಿವ್ಯಕ್ತಿಯ ದೃಷ್ಟಿಯಿಂದ ಹೆಚ್ಚು ಗಮನ ಸೆಳೆಯುವ ಕಥನ ಕವನಗಳಾಗಿವೆ.

"ಹುಲುಸು ಬೆಳೆದಿದೆ ಪೈರು, ತೆನೆತುಂಬಿ ಉದುರುತಿದೆ
ಹೂವಾಗಿ ಹೊಳೆದು ಹುಚ್ಚೆಳ್ಳು ಅವರೆ
ಭೂಮಿದೇವಿಯ ಸೆರಗ ಬಣ್ಣವಾಗೆಸೆಯುತಿರೆ
ಹಸುರುಕ್ಕಿ ಆ ಸೇಲೆಗಂಚು ತೆವರೆ"

–(ಗೌಡರಮಲ್ಲಿ : ಪು. ೯)

ಎಂಬಂತಹ ನುಡಿಗಳಲ್ಲಿ ಕಾವ್ಯಮಯ ಶೈಲಿಯನ್ನು ಕಾಣಬಹುದಾಗಿದೆ. ಹುಲುಸಾದ ಬೆಳೆಬಂದುದನ್ನು ವರ್ಣಿಸುತ್ತಲೇ ಗೌಡನ ಮನದಲ್ಲಿ ಮಲ್ಲಿ ಆವರಿಸುವುದನ್ನು ಕವಿತೆ-ವಿಸ್ತರಿಸುತ್ತಾ ಹೋಗುತ್ತದೆ. ಪುರಾಣ-ವರ್ತಮಾನಗಳನ್ನು ತಳುಕುಹಾಕಿಕೊಂಡ 'ರಾಮನವಮಿ' ಈರವ್ವ - ರಾಮರ ಜೋಡಿಗೆ ಪ್ರತೀಕವಾಗಿ ಸೀತಾರಾಮರ ಕಥೆಯನ್ನು ಬಿಚ್ಚಿಡುತ್ತದೆ. 'ಮೂಕನಮಕ್ಕಳು' ಮತ್ತೊಂದು ರೀತಿಯ ವಿಶಿಷ್ಟತೆಯನ್ನೊಳಗೊಂಡಿದೆ. ಭಾರತೀಯ ಸಂಸ್ಕೃತಿಯ ಒಳಮಗ್ಗಲುಗಳನ್ನು ಬಿಚ್ಚಿತೋರಿಸುವಲ್ಲಿ ಮಾಸ್ತಿಯವರ ಕಥನ ಕವನಗಳು ಮಹತ್ವದ ಪಾತ್ರವಹಿಸುತ್ತವೆ.

ಕನ್ನಡದಲ್ಲಿ ಖಂಡಕಾವ್ಯ ಪರಂಪರೆಯನ್ನು ಪ್ರಾರಂಭಿಸಿದವರಲ್ಲಿ ಮಾಸ್ತಿ ಹಾಗೂ ಗೋವಿಂದಪೈ ಅವರು ಪ್ರಮುಖರು ಇಂಗ್ಲಿಷ್‌ನಲ್ಲಿ `fragment' ಎಂದು ಕರೆಯಲ್ಪಡುವ ಈ ಖಂಡಕಾವ್ಯ ಪ್ರಕಾರ ಕನ್ನಡದಲ್ಲಿ ವಿಶಿಷ್ಟ ರೀತಿಯಿಂದ ಬೆಳೆದಿದೆ. ಮಾಸ್ತಿಯವರ 'ಶ್ರೀರಾಮಪಟ್ಟಾಭಿಷೇಕ' ಒಂದು ಪ್ರಮುಖ ಖಂಡಕಾವ್ಯವಾಗಿದೆ. ಕೃತಿಯ ಹೆಸರೇ ಸೂಚಿಸುವಂತೆ ಶ್ರೀರಾಮನ ಪಟ್ಟಾಭಿಷೇಕವೇ ಇಲ್ಲಿಯ ಪ್ರಧಾನ ವಸ್ತುವಾಗಿದೆ. ಹದಿನಾಲ್ಕು ವರ್ಷಗಳ ವನವಾಸವನ್ನು ಕಳೆದು ರಾವಣಾದಿಗಳ ವಧೆಯಾದ ನಂತರ ಶ್ರೀರಾಮನು, ಸೀತಾ-ಲಕ್ಷ್ಮಣರೊಂದಿಗೆ ಅಯೋಧ್ಯೆಗೆ ಹಿಂದಿರುಗುತ್ತಾನೆ. ಆಗ ಶ್ರೀರಾಮನ ಪಟ್ಟಾಭಿಷೇಕ ಕಾರ್ಯವು ಪ್ರಾರಂಭವಾಗುತ್ತದೆ. ಇದೇ ಈ ಕಾವ್ಯದ ಪ್ರಮುಖ ವಸ್ತುವಾಗಿದೆ. ಈ ಕಾರ್ಯಕ್ಕೆ ಆನುಷಂಗಿಕವಾಗಿ ಹಿಂದೆ ನಡೆದ ಪ್ರಸಂಗಗಳನ್ನು ಮರುಸೃಷ್ಟಿಸುತ್ತಾ ಕವಿ ಮುಂದುವರೆಯುತ್ತಾರೆ.

ವಾಲ್ಮೀಕಿಯ ನಂತರ ಬಂದ ಅನೇಕ ಕವಿಗಳು ಪವಾಡಗಳನ್ನು ಮೆಚ್ಚಿಕೊಂಡು ಹೊಸ ಹೊಸ ಸಾಮಗ್ರಿಗಳನ್ನು ಸೇರಿಸುತ್ತಾ ಹೋದಾಗ ಮೂಲ ರಾಮಾಯಣದ ಕಥೆಯೇ ಮರೆಯಾದುದನ್ನು ಗಮನಿಸಿದ ಮಾಸ್ತಿಯವರು ವಾಲ್ಮೀಕಿಯ ರಾಮ ಸೀತೆಯರನ್ನು ಓದುಗರ ಮುಂದೆ ತಂದು ನಿಲ್ಲಿಸಿದ್ದಾರೆ. ಇಲ್ಲಿ ಬರುವ ಶ್ರೀರಾಮನು ವಿಷ್ಣುವಿನ ಅವತಾರವಾಗಿರದೆ ಮನುಷ್ಯನ ಹಿರಿಮೆಯ ದ್ಯೋತಕವಾಗಿದ್ದಾನೆ. ಮನುಷ್ಯಸಾಧ್ಯತೆಯ ಪ್ರತೀಕವಾಗಿ ಇಲ್ಲಿ ರಾಮನು ಮಾಸ್ತಿಯವರಿಂದ ಸೃಷ್ಟಿಸಲ್ಪಟ್ಟಿದ್ದಾನೆ. ಕವಿಯ ಈ ಉದ್ದೇಶದಿಂದ ವಾಲ್ಮೀಕಿಯ ಕಥೆಗೆ ಹೊಸ ವಿನ್ಯಾಸವೊಂದು ದೊರಕಿದಂತಾಗಿದೆ. ಹದಿನಾಲ್ಕು ವರ್ಷಗಳ ದೀರ್ಘಅಗ್ನಿ ಪರೀಕ್ಷೆಯಿಂದ ಹೊರಬಂದ ರಾಮ-ಲಕ್ಷ್ಮಣ - ಸೀತೆಯರ ತಾಳ್ಮೆ- ಸಹನೆಗಳನ್ನು ಕವಿ

ಇಲ್ಲಿ ಸ್ಪಷ್ಟಪಡಿಸಿದ್ದಾನೆ. ಕೈಕೇಯಿ ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು ಪಟ್ಟಾಭಿಷೇಕ ಬೇಗ ನಡೆಯಲೆಂದು ಹಾರೈಸುತ್ತಾಳೆ. ಮಾಸ್ತಿಯವರು ಆರಿಸಿಕೊಂಡ ಕಥನ ತಂತ್ರ ಕುತೂಹಲಕಾರಿಯಾಗಿದೆ. ಸುಮಂತ್ರ, ಹನುಮಂತ, ಗುಹ, ತಾರೆ, ಅನಿಲ ಈ ಮೊದಲಾದವರಿಂದ ಹಿಂದಿನ ಕಥೆಯನ್ನು ಹೇಳಿಸುವುದು ಸಿಂಹಾವಲೋಕನ ಕ್ರಮದಂತಿದೆ.

ಸರಳರಗಳೆಯಲ್ಲಿರುವ ಈ ಕೃತಿಯಲ್ಲಿ ಪವಾಡಕಥೆಗಳಿಲ್ಲ. ಇಲ್ಲಿಯ ಕಥಾನಾಯಕ-ಶ್ರೀರಾಮನು ಸಾಮಾನ್ಯ ಮನುಷ್ಯನಾಗಿದ್ದು ತನ್ನ ಸಾಧನೆಯ ಮೂಲಕ ಬೆಳೆದು ನಿಲ್ಲುತ್ತಾನೆ. ಹನುಮಂತನು ಸಮುದ್ರವನ್ನು ಹಾರಿಹೋಗದೆ ಈಜಿಹೋಗುವುದು ಹೆಚ್ಚು ವಾಸ್ತವವೆನಿಸುತ್ತದೆ. ಯಾರು ಇಲ್ಲಿ ರಾಕ್ಷಸರಂತೆ ಕಾಣಿಸುವುದಿಲ್ಲ, ಕಾವ್ಯದುದ್ದಕ್ಕೂ ನೈಜತೆ ಕಾಣಿಸುತ್ತದೆ.

ಶ್ರೀರಾಮನ ಕಥೆಯನ್ನು ಹೇಳುತ್ತಲೇ ಮೂರು ನಾಗರೀಕತೆಗಳನ್ನು ಈ ಕಾವ್ಯ ನಮ್ಮ ಮುಂದೆ ನಿಲ್ಲಿಸುತ್ತದೆ. ಅಯೋಧ್ಯೆ, ಕಿಷ್ಕಿಂದೆ ಮತ್ತು ಲಂಕೆಗಳು ಇಲ್ಲಿ ಮೂರು ನಾಗರೀಕತೆಗಳ ಪ್ರತಿನಿಧಿಗಳಂತೆ ಕಾಣಿಸಿಕೊಳ್ಳುತ್ತವೆ. ಕಾಡು-ನಾಡು ಒಂದಕ್ಕೊಂದು ಸಂಘರ್ಷಕ್ಕೊಳಪಡದೆ ಸಮನ್ವಯದ ದಾರಿಹಿಡಿದಿವೆ. ಮನುಷ್ಯನ ಯೋಗ್ಯತೆಯಲ್ಲಿ, ಸಾಧ್ಯತೆಯಲ್ಲಿ ದೃಢ ವಿಶ್ವಾಸವನ್ನಿಡುವುದು ನವೋದಯ ಕಾವ್ಯದ ಪ್ರಮುಖ ತತ್ವವಾಗಿದೆ. ಅದನ್ನು ಮಾಸ್ತಿಯವರು ಇಲ್ಲಿ ಯಶಸ್ವಿಗೊಳಿಸಿದ್ದಾರೆ.

ಪುರಾಣವಸ್ತುವೊಂದನ್ನು ಕುವೆಂಪು ಅವರು ನೋಡುವ ದೃಷ್ಟಿಗೂ, ಮಾಸ್ತಿಯವರ ದೃಷ್ಟಿಗೂ ತುಂಬಾ ವ್ಯತ್ಯಾಸವಿದೆ. ಪಂಪನಿಂದ ಕುವೆಂಪು ಕವಿಯ ವರೆಗೆ ಪುರಾಣ ಕಾವ್ಯಗಳನ್ನು ಮುರಿದು ಕಟ್ಟುತ್ತಾ ಬಂದಿದ್ದಾರೆ. ಮಿತ್ ಒಂದನ್ನು ಬಗೆದು ನೋಡಿದಾಗಲೇ ಒಳನೋಟಗಳು ಕಾಣಿಸಿಕೊಳ್ಳುತ್ತವೆ. ಅಂತಹ ಮುರಿದು ಕಟ್ಟುವ ಪ್ರಯತ್ನ ಮಾಸ್ತಿಯವರಲ್ಲಿ ಕಾಣಿಸುವುದಿಲ್ಲ. ಅವವು ಇದ್ದ ಕಥೆಯನ್ನು ಸರಳವಾಗಿ ಹೇಳುತ್ತಾ ಹೋಗಿ, ಕೊನೆಗೆ ಅಲ್ಲಿ ನವೋದಯ ತತ್ವವೊಂದನ್ನು ಸೇರಿಸಿಬಿಡುತ್ತಾರೆ. ಕುವೆಂಪು ಅವರ 'ರಾಮಾಯಣ ದರ್ಶನಂ' ಕೃತಿಗೆ ಮಾಸ್ತಿಯವರ ಈ ಕೃತಿಯನ್ನು ಹೋಲಿಸಿದಾಗ; ಮೇರುಪರ್ವತದೆದುರು, ಮಣ್ಣಿನ ಗುಂಪಿಯೊಂದನ್ನು ನಿಲ್ಲಿಸಿದಂತಾಗುತ್ತದೆ. ಆದರೆ ಆ ಮಣ್ಣಿನ ಗುಂಪಿಗೂ ಒಂದು ಬೆಲೆಯಿದೆಯೆಂಬುದನ್ನು ಮಾಸ್ತಿ ತುಂಬಾ ವಿನಯದಿಂದಲೇ ತಿಳಿಸುತ್ತಾರೆ. ಹೀಗಾಗಿ ಅವರ 'ಶ್ರೀರಾಮಪಟ್ಟಾಭಿಷೇಕ' ಕಾವ್ಯಕ್ಕೆ ಅದರದೇ ಆದ ವೈಶಿಷ್ಟ್ಯತೆ ಇದೆ. ಮಾಸ್ತಿಯವರ ಕಾವ್ಯದಲ್ಲಿ ಸಂಘರ್ಷ-ಸಪ್ಪಳ-ಹೊಸತನಗಳಿಗಿಂತ, ಸಮನ್ವಯ-ಶಾಂತಿ-ಸಹನೆಯಂತಹ ಗುಣಗಳು ಎದ್ದುಕಾಣುತ್ತವೆ.

**ವೈಶಿಷ್ಟ್ಯಗಳು :**

ಮಾಸ್ತಿಯವರ ಕಾವ್ಯದ ಮುಖ್ಯ ವೈಶಿಷ್ಟ್ಯತೆಗಳನ್ನು ನಾಲ್ಕು ನೆಲೆಗಳಲ್ಲಿ ಗುರುತಿಸಬಹುದಾಗಿದೆ. ೧. ಅವರ ಕಾವ್ಯ ಜೀವ ಪರವಾಗಿದೆ. ಅಲ್ಲಿ ಪರಿಸರ ಕಾಳಜಿಯಿದೆ. ೨. ವಸಾಹತುಶಾಹಿಯ ಕ್ರೌರ್ಯವನ್ನು ಹೇಳುತ್ತಲೇ ದೇಶಿಯ ಮಹತ್ವವನ್ನು ಬಿಂಬಿಸುತ್ತದೆ.

೩. ಮಹಿಳೆಯರ ಬಗೆಗೆ ಗೌರವ ಹೊಂದಿದೆ. ೪. ಪ್ರೀತಿ-ಮಾನವೀಯತೆಯಂತಹ ಮೌಲ್ಯಗಳನ್ನು ಎತ್ತಿಹಿಡಿಯುತ್ತದೆ.

ಭಾರತೀಯ ಸಂಸ್ಕೃತಿಯನ್ನು ಮೆಚ್ಚಿಕೊಂಡ ಮಾಸ್ತಿಯವರು ಅದನ್ನು ತಮ್ಮ ಅನೇಕ ಕವಿತೆಗಳಲ್ಲಿ ವಿವರಿಸಿದ್ದಾರೆ. ಪಾಶ್ಚಾತ್ಯ ಸಂಸ್ಕೃತಿ ಕೇವಲ ಮನುಷ್ಯಕೇಂದ್ರಿತವಾದರೆ, ಭಾರತೀಯ ಸಂಸ್ಕೃತಿ ಜೀವಕೇಂದ್ರಿತವಾದುದಾಗಿದೆ. ಅಲ್ಲಿ ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಉಳಿದ ಜೀವಿಗಳನ್ನು ನಿರ್ಲಕ್ಷಿಸಿ ತಾನು ಮಾತ್ರ ಶ್ರೇಷ್ಠನೆಂದು ಬೀಗುತ್ತಾನೆ. ಆದರೆ ಭಾರತೀಯ ಸಂಸ್ಕೃತಿಯ ಜೀವಕೇಂದ್ರಿತವಾಗಿದೆ. ಇಲ್ಲಿ ಮನುಷ್ಯನಷ್ಟೇ, ಪ್ರಾಣಿ-ಪಕ್ಷಿ-ಸಸ್ಯದಂತಹ ಇತರ ಜೀವಿಗಳಿಗೂ ಪ್ರಾಮುಖ್ಯತೆಯಿದೆ. ಇದನ್ನು ಬಿಂಬಿಸುವುದೇ ಮಾಸ್ತಿಕಾವ್ಯದ ವಿಶಿಷ್ಟತೆಯಾಗಿದೆ. ನವವಸಾಹತುಶಾಹಿ ಆಕ್ರಮಣದ ಹಿನ್ನೆಲೆಯಲ್ಲಿ, ಪ್ರಸ್ತುತ ಸಂದರ್ಭದಲ್ಲಿ ಮಾಸ್ತಿಯಂತಹ ಕವಿಗಳು  ಈ ಕಾರಣಕ್ಕಾಗಿ ಮುಖ್ಯವಾಗುತ್ತಾರೆ. ಹೀಗೆಂದಾಕ್ಷಣ ಮಾಸ್ತಿಯುವರ ದೇಶಿಯ ಪರಿಕಲ್ಪನೆಯೊಂದೇ ಮಾದರಿಯಾಗಬೇಕಾಗಿಲ್ಲ. ಮಾಸ್ತಿಕಾವ್ಯದಲ್ಲಿಯೂ ಅನೇಕ ಮಿತಿಗಳಿವೆ. ದೇಶಿಯ ಹೆಸರಿನಲ್ಲಿ ಅವರು ಸಂಪ್ರದಾಯವನ್ನು-ಬಲಿಯನ್ನು- ಮೌಢ್ಯತೆಯನ್ನು ವೈಭವೀಕರಿಸಿದ್ದಾರೆ. ಇಂತಹ ಕೆಲವು ಮಿತಿಗಳನ್ನು ಬದಿಗಿಟ್ಟು ನೋಡಿದಾಗ, ಮಾಸ್ತಿ ಕಾವ್ಯ ಕೂಡ ದೇಶಿ ಪರಿಕಲ್ಪನೆಯ ದೃಷ್ಟಿಯಿಂದ ಪ್ರಮುಖವಾದ ಅಭಿವ್ಯಕ್ತಿಯಾಗುತ್ತದೆ.

ಮಾಸ್ತಿಯವರ ಜೀವಪರ ನಿಲುವನ್ನು ಸ್ಪಷ್ಟಪಡಿಸಲು ಅವರ 'ಅರುಣ' ಕವನಸಂಕಲನದ' 'ಭಯಪಟ್ಟಅಳಿಲು' ಕವನ ಉತ್ತಮ ಉದಾಹರಣೆಯಾಗಬಲ್ಲುದು. ಕವಿಯನ್ನು ಕಂಡ ಅಳಿಲು ಭಯಪಟ್ಟು ಓಡುತ್ತಾ ಮರವನೇರಿ ಚೀರಲು ಪ್ರಾರಂಭಿಸುತ್ತದೆ. " ಖಳನೋರ್ವ ಬಂದಿಹನು ಕುಳಿತಿಹನು ಬಳಿಯೊಳ್" ಎಂದು ತನ್ನ ಎಳೆಯರಿಗೆ ತಿಳಿಸುತ್ತದೆ. "ಸುಳಿಯದಿರು ಬಾರದಿರು ಬಳಿಗೆ" ಎಂದು ತನ್ನ ಮಡದಿಗೆ ಎಚ್ಚರಿಸುತ್ತದೆ. ಇದನ್ನು ಕಂಡ ಕವಿಯು "ಮುನಿಸು ಬೇಡಳಿಲಯ್ಯ" ಎಂದು ಸಂಬೋಧಿಸುತ್ತ "ನಾನಳಿಲ ತಿನ್ನುವ ಮನುಜನಲ್ಲಯ್ಯ.....ಎಳೆಯರುಂಟೆನಗೆ ನಿನಗೆಂತಂತೆಯೆ" ಎಂದಾಗ ಅಳಿಲಿಗೆ ವಿಶ್ವಾಸ ಮೂಡುತ್ತದೆ. ಇಂತಹ  ಅನೇಕ ಕವಿತೆಗಳಲ್ಲಿ ಮಾಸ್ತಿಯವರು ಜೀವಪರ ನಿಲುವನ್ನು ಸ್ಪಷ್ಟಪಡಿಸಿದ್ದಾರೆ. ಅವರ 'ಮಾಂಬಿ' ಕವನವನ್ನೂ ಇಲ್ಲಿ ಉಲ್ಲೇಖಿಸಬಹುದು. ಮಾಂಬಿ ಹೆಸರಿನ ನಾಯಿ ಸತ್ತು ಹೋದಾಗ ಮನೆಯವರೆಲ್ಲ ಅತ್ತು ಅದರ ಗುಣಗಾನ  ಮಾಡುತ್ತಾರೆ. ನಾಯಿ, ಎತ್ತು, ದನ-ಕರುಗಳು ಮನುಷ್ಯನ ಬದುಕಿನ ಭಾಗವಾಗಿವೆ. ಹಳ್ಳಿಗಾಡಿನ ಬದುಕಿನಲ್ಲಂತೂ ಪಶುಪ್ರಾಣಿಗಳಿಗೆ ಮಹತ್ವದ ಸ್ಥಾನವಿದೆ. ಇದನ್ನರಿತ ಮಾಸ್ತಿಯವರು ಪ್ರಾಣಿದಯಾಪರನಿಲುವನ್ನು ತಮ್ಮ ಅನೇಕ ಕವನಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಪರಿಸರದ ಕಾಳಜಿಯಂತೂ ಮಾಸ್ತಿ ಕಾವ್ಯದುದ್ದಕ್ಕೂ ಕಾಣಸುತ್ತಾ ಹೋಗುತ್ತದೆ. ಕಾಡನ್ನೆಲ್ಲಾ ಕಡಿದು ನಾಡನ್ನು ಬೆಳೆಸುತ್ತಿರುವ ಈ ಸಂದರ್ಭದಲ್ಲಿ ಮಾಸ್ತಿಯವರ 'ರಾಮಪ್ರಿಯ ಉದನ್ತ' ಕಥನಕವನವು ತುಂಬಾ ಪ್ರಸ್ತುತವಾಗುತ್ತದೆ. ವಾರಣಾಸಿಯ ಮಹಾರಾಜನಾದ ರಾಮನೃಪನು ಸುಂದರವಾದ ನಾಡನ್ನು ತ್ಯಜಿಸಿ, ಪತ್ನಿ-ಮಕ್ಕಳನ್ನು ತೊರೆದು ವೈರಾಗ್ಯದಿಂದ

ಕಾಡು ಸೇರುತ್ತಾನೆ. ನಂತರ ಕಾಡಿನಲ್ಲಿ ಪ್ರೀಯ ಎಂಬುವವಳೊಡನೆ ಸಂಸಾರ ಹೂಡಿ ಮಗುವನ್ನು ಪಡೆದು ಸುಖದಿಂದ ಇರುತ್ತಾನೆ. ಎಷ್ಟೋ ವರ್ಷಗಳ ನಂತರ ಈ ವಿಷಯ ತಿಳಿದ ಅರಮನೆಯ ಪರಿವಾರ ಕಾಡಿಗೆ ಹೋಗಿ ರಾಜನನ್ನು ಕಂಡು, ನಾಡಿಗೆ ಮರಳಬೇಕೆಂದು ವಿನಂತಿಸಿಕೊಳ್ಳುತ್ತದೆ. ಆಗ ರಾಜ, ನಾಡಿಗಿಂತ ಕಾಡೇ ವಾಸಿಯೆಂದು ನಿರ್ಧರಿಸಿ ಅಲ್ಲಿಯೇ ಉಳಿಯುತ್ತಾನೆ. ಇಲ್ಲಿ ಮಾಸ್ತಿಯವರು ಪ್ರಕೃತಿಯ ಮಡಿಲಾದ ಕಾಡು ಬಹುಮುಖ್ಯವೆಂದು ಸಾರಿಹೇಳಿದ್ದಾರೆ. "ಶ್ರೀರಾಮ ಪಟ್ಟಾಭಿಷೇಕ" ಖಂಡಕಾವ್ಯದಲ್ಲಿ ಕಾಡುಜನರನ್ನು ಕಂಡು ಕೌಸಲ್ಯೆ ಹೀಗೆ ಹೇಳುತ್ತಾಳೆ. "ಕಾಡು ಜನ ಎಂದುಕೊಳ್ಳುವ ನಿಮ್ಮ ನುಡಿ ಇನಿತು ನಯ, ನಿಮ್ಮ ನಯದ ಎದುರಿನಲಿ; ನಾವು ಕಾಡುಜನ ಆದೇವೋ ಎಂದೆಮಗೆ ಭಯ". ಕೌಸಲ್ಯೆಯ ಈ ನುಡಿಗಳಲ್ಲಿ ನಾಡಿಗಿಂತ ಕಾಡು ಯಾವುದರಲ್ಲಿಯೂ ಕಡಿಮೆಯಿಲ್ಲವೆಂಬ ಅಭಿಪ್ರಾಯವಿದೆ. ಇಂದು ಕಾಡುನಾಶವಾಗತೊಡಗಿದೆ. ನಾಡೇ ಕಾಡಾಗುತ್ತಲಿದೆ. ಈ ಸಂಕೀರ್ಣಬದುಕಿನಲ್ಲಿ ಯಾವುದು ಶ್ರೇಷ್ಠ, ಯಾವುದು ಕನಿಷ್ಠ ಎಂಬುವುದಕ್ಕಿಂತ, ಕಾಡು-ನಾಡುಗಳಲ್ಲಿರುವ ನಮ್ಮ ಪ್ರಕೃತಿ ಸಂಪತ್ತನ್ನುಳಿಸಿಕೊಳ್ಳುವುದು ಇಂದಿನ ಅನಿವಾರ್ಯತೆಯಾಗಿದೆ.

ಪರಿಸರ ಕಾಳಜಿಯನ್ನು ಕಾಣಲು ಮಾಸ್ತಿಯವರ "ಮೂಕನ ಮಕ್ಕಳು" ಕಥನಕವನವನ್ನೋದಬೇಕು. ಹಳ್ಳಿಯ ಮೂಕನೊಬ್ಬ ಪ್ರಾಯಕ್ಕೆ ಬಂದಾಗ ಮದುವೆಯಾಗುವ ಆಸೆ ಹುಟ್ಟುತ್ತದೆ. ಆದರೆ ಮೂಕನಿಗೆ ಮದುವೆಯಾಗಲು ಯಾರೂ ಹೆಣ್ಣು ಕೊಡುವುದಿಲ್ಲ. ಅಷ್ಟರಲ್ಲಿ ಆ ಬೋವನ ಹಳ್ಳಿಗೆ ಅವಧೂತರೊಬ್ಬರು ಬರುತ್ತಾರೆ. ಊರಗೌಡನು ಮೂಕನ ಆಸೆಯನ್ನು ಅವಧೂತರಲ್ಲಿ ನಿವೇದಿಸುತ್ತಾನೆ. ಆಗ ಅವಧೂತರು "ನಿನಗೆ ಮದುವೆ ಬೇಕೋ, ಮಕ್ಕಳು ಬೇಕೋ" ಎಂದು ಸಂಜ್ಞೆಯಿಂದ ಕೇಳುತ್ತಾರೆ. ಮೂಕನು ತನಗೆ ಮಕ್ಕಳು ಬೇಕೆಂದು ಸಂಜ್ಞೆಯಿಂದ ತಿಳಿಸುತ್ತಾನೆ. ಆಗ ಅವಧೂತರು ಅವನನ್ನು ದಿಣ್ಣೆಯ ಮೇಲಕ್ಕೆ ಕರೆದೊಯ್ದು ಮೂರು ಕುಳಿ ತೆಗಿಸಿ, ಅದರಲ್ಲಿ ಮೂರು ಸಸಿ ತರಿಸಿ ನೆಡಿಸಿ "ಇವು ನಿನ್ನ ಮಕ್ಕಳು ಇವನ್ನು ನೀನು ಸಾಕು" ಎಂದೊಪ್ಪಿಸಿ ಹೋಗುತ್ತಾರೆ. ಮೂಕ ಮೂರು ಸಸಿಗಳಿಗೆ ನೀರನೆರೆದು ಬೆಳೆಸುತ್ತಾನೆ. ತಾಯಿ ಮಕ್ಕಳನ್ನು ಜೋಪಾನ ಮಾಡಿದಂತೆ, ಮೂಕನು ಆ ಸಸಿಗಳನ್ನು ಜೋಪಾನಮಾಡುತ್ತಾನೆ. ಅವು ಮರವಾಗಿ ಬೆಳೆದು ನೆಳಲನ್ನು ಕೊಡುತ್ತವೆ, ಹಣ್ಣು-ಹಂಪಲ ನೀಡುತ್ತವೆ. ಆ ನೆರಳಲ್ಲಿ ಅನೇಕ ಜನ ವಿಶ್ರಾಂತಿ ಪಡೆಯುತ್ತಾರೆ. ಮಕ್ಕಳು ಹಣ್ಣನ್ನು ತಿಂದು ಸಂತೋಷ ಪಡುತ್ತವೆ. ಇದನ್ನೆಲ್ಲಾ ಕಂಡ ಮೂಕನಿಗೆ ಸಂತೃಪ್ತಿಯ ಭಾವನೆ ಬರುತ್ತದೆ. ಮೂವತ್ತು ವರ್ಷಗಳ ಅವಧಿಯಲ್ಲಿ ಅವನ ಬದುಕಿನ ದೃಷ್ಟಿಕೋನವೇ ಬದಲಾಗುತ್ತದೆ. ತನ್ನಲ್ಲಿದ್ದ ಕಾಮ ಸುಟ್ಟುಹೋಗಿ ಪ್ರೇಮ ಬೆಳಗತೊಡಗುತ್ತದೆ. ಆ ಮರಗಳೇ ಅವನಿಗೆ ಮಕ್ಕಳಂತೆ ಕಾಣಿಸುತ್ತವೆ. ಗಾಳಿ ಹನುಮನ ಗುಡಿಯ ಮುಂದಿರುವ ಈ ಮೂರು ಮರಗಳನ್ನು ಈಗಲೂ ಮೂಕನ ಮಕ್ಕಳೆಂದೇ ಜನ ಕರೆಯುತ್ತಾರೆಂದು ಹೇಳುತ್ತಾ ಕಥೆ ಮುಗಿಯುತ್ತದೆ. ಈ ಕಥನ ಕವನದಲ್ಲಿ ಅಲ್ಲಲ್ಲಿ ಆಧ್ಯಾತ್ಮದ ಛಾಯೆ ಸುಳಿದರೂ, ಪರಿಸರ ಪ್ರೇಮದ ಅನನ್ಯತೆ ಇಲ್ಲಿ ಮುಖ್ಯವಾಗಿದೆ. ಮರಗಳೇ ಮಕ್ಕಳಂತೆ ಬೆಳೆದುನಿಲ್ಲುವ ರೀತಿ ಗಮನಾರ್ಹವಾಗಿದೆ. ಪರಿಸರ ಪ್ರೇಮವನ್ನು ಬೆಳೆಸುವ ಇಂತಹ ಅನೇಕ ಕವಿತೆಗಳನ್ನು

ಮಾಸ್ತಿ ರಚಿಸಿದ್ದಾರೆ. ಇಂತಹ ಅನೇಕ ಕವಿತೆಗಳಲ್ಲಿ ಕಾವ್ಯದ ಅನನ್ಯತೆ ಕಡಿಮೆಯೆಂದೆನಿಸಿದರೂ ಪರಿಸರ ಕಾಳಜಿ ಎದ್ದುಕಾಣುತ್ತದೆ.

ವಸಾಹತುಶಾಹಿಯ ಹಿಂಸೆ-ಕ್ರೂರತನಗಳನ್ನ ಮಾಸ್ತಿಯವರು ತಮ್ಮ ಕವಿತೆಗಳಲ್ಲಿ ವ್ಯಕ್ತಪಡಿಸುತ್ತ, ಅದಕ್ಕೆ ಪ್ರತಿಯಾಗಿ ದೇಶಿಪ್ರೇಮ ಹಾಗೂ ಸ್ವಾಭಿಮಾನದಂತಹ ಮೌಲ್ಯಗಳನ್ನು ಮುಂದಿಡುತ್ತಾರೆ. ಬ್ರಿಟೀಷರ ಕ್ರೂರತನವನ್ನು ಬಿಂಬಿಸುವ “ಕುರುಬಹಂಪಣ್ಣ” ಕಥನ ಕವನ ಗಮನಾರ್ಹವಾಗಿದೆ. ಹಳ್ಳಿಯ ಹರೆಯದ ಹೆಣ್ಣುಮಗಳು ನಿಂಗವ್ವ ತನ್ನ ತಾಯಿಯೊಂದಿಗೆ ಹೊಲದಿಂದ ಬರುತ್ತಿದ್ದಾಗ ದಾರಿಯಲ್ಲಿ ಆಂಗ್ಲ ಸೈನಿಕರು ನಿಂಗವ್ವನನ್ನು ಕಾಮದ ದೃಷ್ಟಿಯಿಂದ ನೋಡಿ ಹಿಂಬಾಲಿಸುತ್ತಾರೆ. ಕುರುಬರ ಹಂಪಣ್ಣ ರೈಲ್ವೆ ಲೆವೆಲ್ ಕ್ರಾಸಿಂಗ್ ಒಂದರಲ್ಲಿ ಕಾವಲುಗಾರ. ಕಾಮುಕ ಸೈನಿಕರ ಚಲನವಲನಗಳನ್ನು ಗಮನಿಸಿದ ನಿಂಗವ್ವ, ಹಂಪಣ್ಣನ ಮೊರೆಹೋಗುತ್ತಾಳೆ. ಆಗ ಹಂಪಣ್ಣ ಆ ಇಬ್ಬರು ಹೆಣ್ಣುಮಕ್ಕಳನ್ನು ತನ್ನ ಗುಡಿಸಲಲ್ಲಿ ಬಚ್ಚಿಡುತ್ತಾನೆ. ಆಗ ಆಂಗ್ಲ ಸೈನಿಕರು ಹಂಪಣ್ಣನ ಗುಡಿಸಲಲ್ಲಿ ನುಗ್ಗಲು ಪ್ರಯತ್ನಿಸುತ್ತಾರೆ. ಹಂಪಣ್ಣ ಚೊಂಬಿನಿಂದ ಹೊಡೆಯುತ್ತಾನೆ. ಆಗ ಒಬ್ಬ ಸೈನಿಕ ತನ್ನ ಕೋವಿಯಿಂದ ಹಂಪಣ್ಣನನ್ನು ಕೊಂದು ಬಿಡುತ್ತಾನೆ. ನಿಂಗವ್ವ ಮತ್ತು ಮುದುಕಿ ಗೋಳಿಟ್ಟು ಕೂಗಿ ಕೊಂಡಾಗ ಹೊಲಗಳಲ್ಲಿದ್ದ ಅಕ್ಕಪಕ್ಕದವರು ಧಾವಿಸಿ ಬರುತ್ತಾರೆ. ಆಗ ಸೈನಿಕರು ಓಡಿ ಹೋಗುತ್ತಾರೆ. ಸತ್ತ ಹಂಪಣ್ಣನ ಹೆಸರಿನಲ್ಲಿ ಒಂದು ಸ್ಮಾರಕ ನಿಲ್ಲುತ್ತದೆ. ಬ್ರಿಟೀಷರ ನ್ಯಾಯಾಲಯದಲ್ಲಿ ನಿಂಗವ್ವ ದೂರು ಸಲ್ಲಿಸಿದರೂ ನ್ಯಾಯ ದೊರೆಯದಂತಾಗುತ್ತದೆ. ಅವರ ಪಕ್ಷಪಾತಗುಣವನ್ನು, ಬ್ರಿಟೀಷರ ನ್ಯಾಯಾಲಯದ ಅನೀತಿಯನ್ನು ಕವನದ ಕೊನೆಯಲ್ಲಿ ತಿಳಿಸಲಾಗಿದೆ. ಭಾರತ ಸ್ವಾತಂತ್ರ್ಯ ಚಳುವಳಿಯ ಸಂದರ್ಭದ ಈ ಕಥೆ ಮನಮಿಡಿಯುವಂತಿದೆ. ವಸಾಹತುಶಾಹಿಯ ಅನ್ಯಾಯದ ಅನೇಕ ಮುಖಗಳಲ್ಲಿ ಒಂದು ಮುಖವನ್ನು ಮಾಸ್ತಿಯವರು ಈ ಕಥನಕವನದಲ್ಲಿ ತೋರಿಸಿದ್ದಾರೆ. ಮಹಿಳೆಯರ ಮಾನ ರಕ್ಷಣೆಗಾಗಿ ತನ್ನ ಪ್ರಾಣವನ್ನೇ ಕೊಟ್ಟ ಹಂಪಣ್ಣ ಇಲ್ಲಿ ಆದರ್ಶದ ಸಂಕೇತವಾಗಿದ್ದಾನೆ. ಇಂತಹ ಕಥನಕವನಗಳು ಭಾರತೀಯ ಸಂಸ್ಕೃತಿಯ ಹೆಗ್ಗಳಿಕೆಯನ್ನು ವಿವರಿಸುತ್ತವೆ. ಮಹಿಳೆಯರ ಮಾನ ರಕ್ಷಣೆಗಾಗಿ ಹಂಪಣ್ಣನಲ್ಲಿರುವ ನಿಷ್ಠೆ, ನಿಂಗವ್ವನಲ್ಲಿರುವ ಪಾತಿವ್ರತ್ಯದಂತಹ ಮೌಲ್ಯಗಳು ಬ್ರಿಟೀಷರ ಕಾಮುಕತನ-ಸ್ವಾರ್ಥ-ಅನ್ಯಾಯದೆದುರು ಪುಟಕ್ಕಿಟ್ಟ ಚಿನ್ನದಂತೆ ಬೆಳಗತೊಡಗುತ್ತವೆ.

ಸ್ವಾಭಿಮಾನ-ನಿಷ್ಠಾಭಕ್ತಿಯನ್ನು ಹೇಳುವ ಕೆಲವು ಕವನಗಳನ್ನು ಮಾಸ್ತಿ ರಚಿಸಿದ್ದಾರೆ. “ನೀಲಗಾರ ಮಾದ” ಕಥನ ಕವನ ಈ ಕಾರಣಕ್ಕಾಗಿ ಉತ್ತಮ ಉದಾಹರಣೆಯಾಗಿದೆ. ಮೈಸೂರು ಸೀಮೆಯನ್ನು ಹೈದರಾಲಿ ಆಳುತ್ತಿದ್ದ ಸಂದರ್ಭವದು. ಬಾಬಯ್ಯನ ಹಬ್ಬದಲ್ಲಿ ಎಲ್ಲರೂ ಹುಲಿವೇಷ ಹಾಕಿ ಹಬ್ಬ ಆಚರಿಸುತ್ತಿರುವಾಗ, ನೀಲಗಾರ ಮಾದ ಮಾತ್ರ ವೇಷ ಹಾಕದೆ ಮಾರಮ್ಮದೇವಿಗೆ ತನ್ನ ನಿಷ್ಠಾಭಕ್ತಿಯನ್ನು ತೋರಿಸುತ್ತಾನೆ. ಸ್ವತಃ ಹೈದರಾಲಿಯೇ ಹೇಳಿಕಳಿಸುತ್ತಾನೆ. ಅಲ್ಲಿಯೂ ಕೂಡ ಮಾದ ತನ್ನ ದೇವಿಯ ಬಗೆಗಿದ್ದ ನಿಷ್ಠೆಯನ್ನು ವ್ಯಕ್ತಿಪಡಿಸಿ ಹೈದರಾಲಿಯಿಂದಲೂ ಮೆಚ್ಚುಗೆಗೆ ಪಾತ್ರನಾಗುತ್ತಾನೆ. ಹೀಗೆ ಸ್ವಾಭಿಮಾನ-ನಿಷ್ಠೆಗಳನ್ನು ಬಿಂಬಿಸುವ ಅನೇಕ ರಚನೆಗಳು ಮಾಸ್ತಿಯವರಲ್ಲಿವೆ.

ವಸಾಹತು ಶಾಹಿಗೆ ಪ್ರತಿಯಾಗಿ ಬಿಚ್ಚಿಕೊಳ್ಳುವ ದೇಶಿ ಪ್ರೇಮವನ್ನು ಮಾಸ್ತಿಯವರ ಕವನಗಳಲ್ಲಿ ಕಾಣಬಹುದಾಗಿದೆ. 'ಚೆಲುವು' ಕವನ ಸಂಕಲನದ 'ಕೊಂಬು' ಕವನದಲ್ಲಿ ಕನ್ನಡ ನಾಡಿನ ಊರಿನ ಹೆಸರುಗಳ ಹೂಮಾಲೆಯೇ ಇದೆ. ಅರಳುಮಲ್ಲಿಗೆ, ಕೂಡು ಮಲ್ಲಿಗೆ, ಮಲ್ಲಿಗೇನ ಹಳ್ಳಿ, ಮಲ್ಲಿಗೆವಾಳ, ಸಂಪಿಗೆ, ಮಾದಲ, ಮುತ್ತೋಣಿ, ಬೆಳವಲ, ನೆಲಮಾವು, ಕೋಗಿಲೆ, ಎಸಳೂರು ಈ ಮೊದಲಾದ ಹೆಸರುಗಳು ಎಷ್ಟೊಂದು ಸುಂದರವಾಗಿಯೆಂದು ಹೇಳುವ ಕವಿ :

"ಏನು ಹೆಸರು ಇವು, ನಮ್ಮ ತಾತಂದಿರು.
ನಾಡೊಳಿಟ್ಟ ಹೆಸರು;
ಜೇನುಸುರಿಯವೊಲು ಇನಿದು, ಬಲ್ಲವರ ಹಾಡಿನವೊಲು ಮೆಲಿತು"

–(ಚೆಲುವು : ಪು. ೫೪)

ಎಂದು ಉತ್ಕಟವಾದ ದೇಶಾಭಿಮಾನವನ್ನೂ, ಭಾಷಾಭಿಮಾನವನ್ನೂ ವ್ಯಕ್ತಪಡಿಸುತ್ತಾರೆ. ಹರಿದುಹಂಚಿಹೋಗಿರುವ ಕನ್ನಡ ನಾಡಿನ ಸ್ಥಿತಿಯನ್ನು ಕಂಡು ಮರುಗುತ್ತಲೇ ಪ್ರಾಂತಭೇದಭಾವದಿಂದ ನಾಡು ಹಂಚಿಹೋಗುವದನ್ನವರು ಖಂಡಿಸುತ್ತಾರೆ.

"ನಾವೆಲ್ಲ ಒಂದು ಮನೆಯವರಣ್ಣ ತಮ್ಮದಿರು
ನಮ್ಮೆಲ್ಲರನು ಪಡೆದುದೊಂದೆ ನಾಡಿನ ಬಸಿರು
ಎಂದು ನಾವರಿದೆವೇ ನಮಗೆ ಇನ್ನಾರೆದುರು?"

–(ಮಲಾರ : ಪು. ೨೩)

ಎಂದು ಪ್ರಶ್ನಿಸುತ್ತಾರೆ. ಕನ್ನಡನಾಡು-ನುಡಿ-ಸಂಸ್ಕೃತಿಯ ಬಗೆಗೆ ಮಾಸ್ತಿಯವರಿಗೆ ಅಪಾರ ಗೌರವವಿದೆ. ಅದನ್ನವರು ಅನೇಕ ಕವನಗಳಲ್ಲಿ ಅಭಿವ್ಯಕ್ತಿಸುತ್ತಾ ಹೋಗಿದ್ದಾರೆ.

ಭಾರತೀಯ ಮಹಿಳೆಯರ ಬಗೆಗೆ ಕವಿ ಮಾಸ್ತಿ ಅಪಾರ ಗೌರವವನ್ನು ವ್ಯಕ್ತಪಡಿಸಿದ್ದಾರೆ. 'ತಾವರೆ' ಕವನಸಂಕಲನದ 'ನಲವತ್ತರ ನಲುಗು' ಕವನವನ್ನು ಗಮನಿಸಬಹುದಾಗಿದೆ. ಈ ಕವನದಲ್ಲಿ ಗಂಡನಿಗೆ ಹೆಂಡತಿಯು ಅತ್ತೆಯ ಮಗಳಾಗಿ ಮುತ್ತಿನ ಚೆಂಡಾಗಿ ಮಾವನ ಮಗಳಾಗಿ ಮಲ್ಲಿಗೆಯರಳಾಗಿ ಕಾಣಿಸುವುದರ ಜತೆಗೆ ಗುರುವಾಗಿಯೂ ಕಾಣಿಸಿಕೊಂಡಿದ್ದಾಳೆ.

"ಬಾಳಿನ ಬೆಳಕೆ ಜೀವದ ಕಳೆಯೆ
ಒದವಿದ ಸೊಗಸೆ, ನೀತಿಯ ನೆಲೆಯೆ
ಹೇಳದೆ ಧರ್ಮವ ಕಲಿಸುವ ಗುರುವೆ
ಬದುಕಿದು ಬದುಕೆ ನೀನಿದನುಳಿಯೆ?"

–(ತಾವರೆ : ಪು. ೨೮)

ಹೆಂಡತಿ, ಪ್ರೇಯಸಿ-ಚೆಲುವಿಯಾಗಿರುವುದರೊಂದಿಗೆ ಗುರುವಾಗಿಯೂ ಬದುಕನ್ನು ಮುನ್ನಡೆಸಿದ್ದಾಳೆ. ಹೆಣ್ಣನ್ನು ಉನ್ನತ ದೃಷ್ಟಿಯಿಂದ ಕಾಣುವ ಕವಿಯ ಮನಸ್ಸನ್ನು ಇಲ್ಲಿ

ಗಮನಿಸಬಹುದಾಗಿದೆ. ಹೆಣ್ಣನ್ನು ನಿಸರ್ಗಕ್ಕೆ ಹೋಲಿಸಿದ ಕವಿ, ಆಕೆ ಮಗಳಾಗಿ-ಮಡದಿಯಾಗಿ-ತಾಯಿಯಾಗಿ-ಅಜ್ಜಿಯಾಗಿ ಜಗದಂಬೆಯಂತೆ ಜೀವನ ನಾಟಕವನ್ನು ನಡೆಯಿಸುವ ರೀತಿಯನ್ನು ಕಂಡು ಆಶ್ಚರ್ಯಗೊಂಡಿದ್ದಾರೆ. ಅವಳು ತ್ಯಾಗದ ಪ್ರತಿಮೆಯಾಗಿ, ಸೇವೆಯ ಸಂಕೇತವಾಗಿ, ಸಹನೆಯ ಒರತೆಯಂತಿದ್ದಾಳೆ. ಕರ್ಪೂರದಂತೆ ಉರಿದು ಬೆಳಗಿದ್ದಾಳೆ, ಶ್ರೀಗಂಧದಂತೆ ತೇದು ಪರಿಮಳ ಹರಡಿದ್ದಾಳೆ. 'ದನಿ' ಯೆಂಬ ಇನ್ನೊಂದು ಕವನದಲ್ಲಿ ಹೆಣ್ಣಿನ ಹಿರಿಮೆಯನ್ನು ಬಣ್ಣಿಸಲಾಗಿದೆ.

ಮಾಸ್ತಿಯವರು 'ಚಿಕ್ಕಮಲ್ಲಮ್ಮ' ಕವಿತೆಯಲ್ಲಿ ತೋರುವ ಹೆಣ್ಣಿನ ವ್ಯಕ್ತಿತ್ವದ ಎತ್ತರ ಗಮನಿಸುವಂತಹದ್ದಾಗಿದೆ. ರೂಪವಂತೆ, ಗುಣವಂತೆಯಾದ ಮಲ್ಲಮ್ಮ ಒಳ್ಳೆಯ ಮಗಳಾಗಿ, ಒಳ್ಳೆಯ ಗೆಳತಿಯಾಗಿ, ಒಳ್ಳೆಯ ಹೆಂಡತಿಯಾಗಿ ಬದುಕುವ ರೀತಿಯನ್ನು ತುಂಬಾ ವರ್ಣನಾತ್ಮಕವಾಗಿಯೇ ಚಿತ್ರಿಸಿದ್ದಾರೆ.

"ಮಾತಾಡಿದಳೋ ಮುತ್ತಿನ ಮಳೆಯೋ
ಪ್ರೀತಿಸಿ ನಕ್ಕಳೋ ಬೆಳಕಿನ ಬೆಳೆಯೊ"

**-(ಚೆಲುವು : ಮ ೪೨)**

ಇಂತಹ ಚಿಕ್ಕಮಲ್ಲಮ್ಮನನ್ನು ಪುಂಡರು ಅಪಹಿಸುತ್ತಾರೆ. ಅವಳ ಮೇಲೆ ಅತ್ಯಾಚಾರ ಮಾಡಿ ಶೀಲಾಪಹರಣ ಮಾಡುತ್ತಾರೆ. ಹೀಗೆ ಶೀಲಕಳೆದುಕೊಂಡ ಚಿಕ್ಕಮಲ್ಲಮ್ಮನನ್ನು ಆಕೆಯ ಮನೆಯ ಮುಂದೆ ತಂದು ಒಗೆದು ಹೋಗುತ್ತಾರೆ.

ಇಲ್ಲಿಂದ ಕಥೆ ಹೊಸ ತಿರುವು ಪಡೆಯುವ ಬದಲು ದುರಂತದಲ್ಲಿ ಕೊನೆಗೊಳ್ಳುತ್ತದೆ. ಮನೆಯವರೆಲ್ಲಾ ಒಳಗೆ ಕರೆದರೆ ಮಲ್ಲಮ್ಮ ಬಾರೆನೆಂದು ಹೇಳುತ್ತಾಳೆ. ನನ್ನೊಡಲು ಹೊಲಸಾಗಿದೆ, ನಾನು ಶೀಲಗೆಟ್ಟವಳು, ನಾನಿಂದು ಕೊಂಡಹಾರಬೇಕೆಂದು ತಿಳಿಸುತ್ತಾಳೆ. ಮೈದುನರಿಗೆ ಹೇಳಿ ಊರದೇವಸ್ಥಾನದ ಮುಂದೆ ಕೊಂಡ ಸಿದ್ಧಪಡಿಸಲು ವಿನಂತಿಸುತ್ತಾಳೆ. ಗಂಡ-ಮಾವ-ಮೈದುನ-ತಂದೆ ಯಾರು ಹೇಳಿದರೂ ಕೇಳದೆ ತನ್ನ ನಿಲುವಿಗೆ ಬದ್ಧಳಾಗುತ್ತಾಳೆ. ಅವಳ ಗೆಳತಿ ಬಂದು, ಮಲ್ಲಮ್ಮನ ಎಳೆಯ ಕೂಸನ್ನು ತಂದು ಎದುರಲ್ಲಿಟ್ಟರೂ ಅವಳ ಗೆಳತಿ ಬಂದು, ಮಲ್ಲಮ್ಮನ ಎಳೆಯ ಕೂಸನ್ನು ತಂದು ಎದುರಲ್ಲಿಟ್ಟರೂ ಅವಳ ಮನ ಪರಿವರ್ತನೆಯಾಗುವುದಿಲ್ಲ. ಹೇಸಿಗೆಯಾಗಿಹ ಈ ಮೈಯನು ಬಿಟ್ಟು, ಮುಂದಿನ ಜನ್ಮದಲ್ಲಿ ಇದೇ ತಾಯಿ ತಂದೆಗಳ ಉದರಲ್ಲಿ ಜನಿಸಿ, ಇದೇ ಗಂಡನನ್ನು ಸೇರುತ್ತೇನೆಂದು ವಿಜ್ಞಾಪಿಸಿಕೊಂಡು ಕೊಂಡಹಾರಿ ಸಾವನ್ನಪ್ಪುತ್ತಾಳೆ. ಲಾವಣಿಯ ರೂಪದಲ್ಲಿ ಸಾಗುವ ಈ ಕಥನಕವನಕ್ಕೆ ಜನಪದರ ಬದುಕು ಪ್ರೇರಣೆಯಾಗಿದೆ.

ಆದರೆ ಮಾಸ್ತಿಯಂತಹ ಕವಿಗಳು ಇಲ್ಲಿ ಆತ್ಮಾಹುತಿಯನ್ನು ವೈಭವೀಕರಿಸುವುದು ಸರಿಯೆ? ಎಂಬ ಪ್ರಶ್ನೆ ಸಹಜವಾಗಿಯೇ ಯಾವ ತಪ್ಪನ್ನೂ ಮಾಡದ ಮಲ್ಲಮ್ಮನಂತಹ ಮಹಿಳೆ ಹೀಗೆ ಸಂಪ್ರದಾಯದ ಹೆಸರಿನಲ್ಲ ಬಲಿಯಾಗುವುದು ಎಷ್ಟರ ಮಟ್ಟಿಗೆ ಸೂಕ್ತ? ಯಾರೋ ಪುಂಡರು ಮಾಡಿದ ತಪ್ಪಿಗಾಗಿ, ಅಮಾಯಕ ಹೆಣ್ಣೊಬ್ಬಳ ಆಹುತಿ ಹೇಗೆ ಸಮಂಜಸ? ಶೀಲದಂತಹ ವಿಷಯವನ್ನೂ ಉದಾತ್ತೀಕರಿಸಿ ಪುನರ್ಜನ್ಮದಂತಹ

ನಂಬಿಕೆಯನ್ನು ವೈಭವೀಕರಿಸಿ ಮುಗ್ಧಹೆಣ್ಣೊಬ್ಬಳನ್ನು ಹೀಗೆ ಆಹುತಿಗೀಡುಮಾಡುವುದು ಸರಿಯೇ? ಎಂಬಂತಹ ಪ್ರಶ್ನಗಳು ಇಂದಿನ ಸಂದರ್ಭದಲ್ಲಿ ಎದ್ದು ನಿಲ್ಲುವುದು ಸಹಜ.

ಆದರೆ ಮಾಸ್ತಿಯವರ ದೃಷ್ಟಿಕೋನ ಭಿನ್ನವಾದುದಾಗಿದೆ. ಸಾಂಪ್ರದಾಯಿಕ ಹಿಂದೂ ಮಹಿಳೆಯ ಪ್ರತಿನಿಧಿಯಾಗಿ ಇಲ್ಲಿ ಮಲ್ಲಮ್ಮ ಚಿತ್ರಿತವಾಗಿದ್ದಾಳೆ. ಜನಪದ ಕಾವ್ಯದಲ್ಲಿ ಇಂತಹ ಅನೇಕ ಉದಾಹರಣೆಗಳಿವೆ. ಕಡ್ಲಿಮಟ್ಟಿ ಕಾಶೀಬಾಯಿ ತನ್ನ ಕೂಸನ್ನು ಬಲಿಕೊಟ್ಟು, ತನ್ನ ಶೀಲವನ್ನುಳಿಸಿಕೊಳ್ಳುತ್ತಾಳೆ. ಪ್ರಾಣಕ್ಕಿಂತ ಶೀಲ ಮುಖ್ಯವೆಂಬ ತತ್ವವನ್ನು ಇಲ್ಲಿಯ ಕಥಾನಾಯಕಿ ಮಲ್ಲಮ್ಮ ನಂಬಿದ್ದಾಳೆ. ಜನಪದ ಕಾವ್ಯದಲ್ಲೇನೊ ಸರಿ; ಆದರೆ ನವೋದಯ ಕವಿ ಮಾಸ್ತಿಯವರೂ ಕೂಡ ಇಂತಹ ಆತ್ಮಾಹುತಿಯನ್ನು ಪುರಸ್ಕರಿಸಬಹುದೆ? ಎಂಬ ಪ್ರಶ್ನೆ, ಪ್ರಶ್ನೆಯಾಗಿಯೇ ಉಳಿಯುತ್ತದೆ.

ಹೆಣ್ಣಿನ ಸಾಧ್ಯತೆಯನ್ನು ಎತ್ತಿಹೇಳುವಲ್ಲಿ "ಗೌಡರ ಮಲ್ಲಿ" ಕಥನ ಕವನ ಪ್ರಮುಖ ಉದಾಹರಣೆಯಾಗಿದೆ. ಇದು ಅತ್ಯಂತ ಜನಪ್ರಿಯವಾದ ಕವನವಾಗಿದೆ. 'ಜಾತಿಗಿಂತ ಪ್ರೀತಿ ಮೇಲು' ಎಂದು ಸಾರುವ ಈ ಕವನದಲ್ಲಿ ಮನುಷ್ಯ ಸಂಬಂಧಗಳ ಸಂಕೀರ್ಣತೆಯನ್ನು ಕಾಣಬಹುದಾಗಿದೆ. ಹೆಂಡತಿಯನ್ನು ಕಳೆದುಕೊಂಡ ಗೌಡನಿಗೆ ಇನ್ನೂ ತಾರುಣ್ಯವಿದೆ. ಊರ ಬಸವಿ ಹದಿನೆಂಟರ ಹರೆಯದ ಮಲ್ಲಿಯನ್ನು ಕಂಡು ಗೌಡ ಮರುಳಾಗುತ್ತಾನೆ. ಸತ್ತಹೆಂಡತಿಯ ದುಃಖ ಒಂದು ಕಡೆಗಿದ್ದರೆ, ಮಲ್ಲಿಯ ಸಹಜ ಸೌಂದರ್ಯ ಮತ್ತೊಂದು ಕಡೆಗಿದೆ. ಕೊನೆಗೆ ಗೌಡ ಮಲ್ಲಿಯನ್ನು ಬಯಸಿ ತಾನು ಒಲಿದುದನ್ನು ಪಿಲ್ಲಿಯ ಮುಂದೆ ಹೇಳಿಕಳಿಸುತ್ತಾನೆ. ಗೌಡ ತನಗೆ ಒಲಿದಿದ್ದಾನೆಂದು ತಿಳಿದ ತಕ್ಷಣ ಮಲ್ಲಿ ಗೌಡನನ್ನು ಕೂಡಲು ಒಪ್ಪುತ್ತಾಳೆ. ಹೀಗೆ ಪರಸ್ಪರ ಕೂಡಿದ ಮಲ್ಲಿ ಮತ್ತು ಗೌಡ ಇವರ ಸಂಬಂಧ ಐವತ್ತು ವರ್ಷಗಳವರೆಗೆ ನಿರಂತರವಾಗಿ ನಡೆಯುತ್ತದೆ. ಮದುವೆಯಾಗಿದ್ದ ಹೆಂಡತಿಗಿಂತಲೂ ಅಧಿಕವಾಗಿ ಮಲ್ಲಿ ಗೌಡನ ಬದುಕನ್ನು ವ್ಯಾಪಿಸುತ್ತಾಳೆ.

ಸ್ತ್ರೀವಾದದ ನೆಲೆಯಲ್ಲಿ ನೋಡಿದರೆ ಈ ಕವನಕ್ಕೆ ಬೇರೆ ರೀತಿಯ ಅರ್ಥಪ್ರಾಪ್ತವಾಗಬಹುದು. ಆದರೆ ಇಲ್ಲಿ ಮಾಸ್ತಿಯವರ ಆಶಯವು ಪ್ರೀತಿಯಂತಹ ಮೌಲ್ಯವನ್ನು ಎತ್ತಿ ಹಿಡಿಯುವುದಾಗಿದೆ. ಇಲ್ಲಿಯ ಗೌಡ ಫ್ಯೂಡಲ್ ವ್ಯವಸ್ಥೆಯ ಪ್ರತಿನಿಧಿಯಾಗಿರದೆ ಬಸವಿಯೊಬ್ಬಳನ್ನು ಗಾಢವಾಗಿ ಪ್ರೀತಿಸುವ ಹೃದಯವಂತನಾಗಿದ್ದಾನೆ. ಒಬ್ಬೊರಿಗೊಬ್ಬರು ಪರಸ್ಪರ ಪ್ರೀತಿಸಿ ಅರ್ಧಶತಮಾನದವರೆಗೆ ಗಂಡ-ಹೆಂಡತಿಯರಂತೆ ಬಾಳಿದರೂ ಮದುವೆಯಾಗದೇ ಇರುವುದು ಇಲ್ಲಿಯ ವಿಶೇಷವಾಗಿದೆ. ಕಾಮ-ಪ್ರೇಮಗಳೆಲ್ಲಾ ಕೌಟುಂಬಿಕ ಚೌಕಟ್ಟಿನೊಳಗೆ ನಡೆಯುವಂಥವುಗಳೆಂದು ನಂಬಿದ್ದ ಮಾಸ್ತಿಯಂತಹ ಲೇಖಕರು ಇಂತಹ ಕಥನ ಕವನ ರಚಿಸಿರುವುದು ಕುತೂಹಲಕಾರಿಯಾಗಿದೆ. ಪ್ರತಿಯೊಂದು ಹಂತದಲ್ಲಿಯೂ ಭಾರತೀಯ ಚೌಕಟ್ಟನ್ನು ಕಟ್ಟಿಕೊಂಡು ಬಂದ ಮಾಸ್ತಿಯವರು ಈ ಕವನದಲ್ಲಿ ಆ ಚೌಕಟ್ಟನ್ನು ಮೀರುವುದರ ಮೂಲಕ ಪ್ರೀತಿಯ ಅನಂತತೆಯನ್ನು ಬಿಚ್ಚಿ ತೋರಿಸಿದ್ದಾರೆ. ಇಲ್ಲಿಯ ಗೌಡ ಲಂಪಟನಲ್ಲ, ರಸಿಕ; ಮಲ್ಲಿ ಗೃಹಿಣಿಯಲ್ಲ, ವೇಶ್ಯೆ. ಆದರೆ ಕಥೆ ಮುಂದುವರೆದಂತೆಲ್ಲಾ ಮಲ್ಲಿ, ವೇಶ್ಯೆಯಾಗಿದ್ದವಳು ಗೌಡನನ್ನು ವರಿಸುವುದರ

ಮೂಲಕ ದೊಡ್ಡ ಗೃಹಿಣಿಯಾಗಿ ಬೆಳೆದು ನಿಲ್ಲುತ್ತಾಳೆ. ಆಕೆ ಗೌಡನ ಮನೆಯನ್ನು ಪ್ರವೇಶಿಸಿದಾಗ ವಿರೋಧ ವ್ಯಕ್ತಪಡಿಸಿದ ಎಲ್ಲರ ಮನಸ್ಸನ್ನೂ ಮಲ್ಲಿ ಗೆದ್ದು ನಿಲ್ಲುತ್ತಾಳೆ.

'ಅಸಹ್ಯ' ಎಂದು ಕೊಂಡಿದ್ದ ಗೌಡನ ಪರಿವಾರಕ್ಕೆಲ್ಲಾ ಮಲ್ಲಿ 'ಅನಿವಾರ್ಯ' ವಾಗುತ್ತಾಳೆ. ಗೌಡನ ಮನ-ಮನೆಗಳೆರಡರಲ್ಲೂ ವ್ಯಾಪಿಸಿನಿಂತ ಮಲ್ಲಿ ನಿಜವಾದ ಗೌಡತಿಯಾಗಿ ಬೆಳೆದು ನಿಲ್ಲುತ್ತಾಳೆ. ಪರಿವಾರದವರಿಗೆಲ್ಲಾ ಆತ್ಮೀಯಳಾಗುತ್ತಾಳೆ; ಪ್ರೀತಿಗೆ ಪಾತ್ರಳಾಗುತ್ತಾಳೆ. ಅತ್ತೆ, ಅತ್ತಿಗೆ, ನಾದಿನಿಯರಿಗೆ ಮಲ್ಲಿ ಅಚ್ಚು ಮೆಚ್ಚಿನವಳಾಗುತ್ತಾಳೆ. ಹಲ್ಲಿಲ್ಲದತ್ತೆಗೆ ಎಲೆಯಡಿಕೆ ಕುಟ್ಟಿ ಕೊಡುತ್ತಾಳೆ. ಅತ್ತಿಗೆ, ನಾದಿನಿಯರ ಬಟ್ಟೆ ಬರೆ ಒಗೆದು ಅವರ ಮನಗೆಲ್ಲುತ್ತಾಳೆ. ಮಲ್ಲಿಗೆ ಒಂದು ಗಂಡು, ಒಂದು ಹೆಣ್ಣು ಮಗುವಾಗಿ, ಎರಡೂ ಮಧ್ಯಂತರದಲ್ಲೇ ಅಸುನೀಗುತ್ತವೆ. ಮಲ್ಲಿ ಹತ್ತು ವರ್ಷಗಳ ವರೆಗೆ ನೀರೆರೆದು ಬೆಳೆಸಿದ ತೋಪು 'ಗಡರ ಮಲ್ಲಿಯ ತೋಪು' ಎಂದು ಕರೆಯಲ್ಪಡುತ್ತದೆ. ತನ್ನ ಮಗಳ ಹೆಸರಿನಲ್ಲಿ ತೋಡಿಸಿದ ಬಾವಿ 'ಮಲ್ಲಿಯ ಗೌಡರಬಾವಿ'ಯೆಂದೆನಿಸಿಕೊಳ್ಳುತ್ತದೆ. ಕೊನೆಗೆ ಗೌಡ ಸಾಯುತ್ತಾನೆ, ಪುದಿವಟ್ಟು ಹಾಕಿಸಿ ಮಲ್ಲಿಯೂ ಸಾಯುತ್ತಾಳೆ. ತಾನು-ಗೌಡ ಸೇರಿದ ದಿನದ ನೆನಪಿಗೆ ಉತ್ಸವನಡೆಯಬೇಕೆಂದು ಮಲ್ಲಿ ಪುದಿವಟ್ಟುವಿನಲ್ಲಿ ಬರೆಸಿದಂತೆ ಇಂದಿಗೂ ಅಲ್ಲಿ ವರ್ಷಕ್ಕೊಮ್ಮೆ ಕಾರ್ತೀಕಮಾಸದಲ್ಲಿ ಉತ್ಸವ ನಡೆಯುತ್ತದೆಂದು ಕಥೆಕೊನೆಗೊಳ್ಳುತ್ತದೆ.

ಇಲ್ಲಿ ವೇಶ್ಯೆಯೊಬ್ಬಳು ಗೌಡನನ್ನು ಕೂಡಿಕೊಂಡು ಗೃಹಿಣಿಯಾಗಿ ಬೆಳೆದು ಗೌಡನ ಪರಿವಾರದವರ ಮನಸ್ಸನ್ನು ಗೆದ್ದು ಇಡೀ ಆ ಮನೆತನದ ಕೇಂದ್ರ ಬಿಂದುವಾಗಿ ಬೆಳೆದು ನಿಲ್ಲುವುದು ಹೆಣ್ಣೊಬ್ಬಳ ಸಾಧ್ಯತೆಗಳನ್ನು ವಿವರಿಸುವ ಕಥೆಯಾಗಿದೆ. ಮಲ್ಲಿ ಬೇಡರ ಜಾತಿಯವಳೆಂಬ ಕೀಳರಿಮೆಯಾಗಲಿ, ಆಕೆ ಬಸವಿಯೆಂಬ ತುಚ್ಛಭಾವನೆಯಾಗಲಿ ಇಲ್ಲಿ ಮೂಡದೆ ಅವಳು ಪ್ರೀತಿಯ ದ್ಯೋತಕವಾಗಿ, ಮಾನವೀಯತೆಯ ಪ್ರತಿನಿಧಿಯಾಗಿ ಮಹಾಪಾತ್ರವನ್ನು ನಿರ್ವಹಿಸಿದ್ದಾಳೆ. ಇಲ್ಲಿ ಯಾವುದೇ ಮಡಿವಂತಿಕೆಗೆ ಆಸ್ಪದವಿಲ್ಲ. ಎರಡು ಜೀವಗಳು ಪರಸ್ಪರ ಪ್ರೀತಿಸಿ ಎಲ್ಲ ಎಲ್ಲೆಗಳನ್ನು ಮೀರಿ, ಎಲ್ಲ ಚೌಕಟ್ಟಗಳನ್ನು ದಾಟಿ ಪ್ರೀತಿಯೊಂದನ್ನೇ ಹಿಡಿದುಕೊಂಡು ಕೊನೆಗೊಳ್ಳುವುದು ಬಹು ಮುಖ್ಯ ಸಂಗತಿಯಾಗುತ್ತದೆ. ಹೆಣ್ಣೊಬ್ಬಳು ಅಸಮಾನತೆಯ ವ್ಯವಸ್ಥೆಯಲ್ಲಿಯೂ ತನ್ನ ಸಾಧ್ಯತೆಗಳಿಂದ ಹೇಗೆ ಎತ್ತರಕ್ಕೆ ಬೆಳೆದು ನಿಲ್ಲ ಬಲ್ಲಳೆಂಬುದಕ್ಕೆ ಈ ಕವನ ಸಾಕ್ಷಿಯಾಗಿದ್ದೆ.

## ಸಮಾರೋಪ

ಮಾಸ್ತಿಯವರ ಕಾವ್ಯದ ಮತ್ತೊಂದು ವೈಶಿಷ್ಟ್ಯತೆಯೆಂದರೆ, ಮನುಷ್ಯತ್ವದ ಘನತೆಯನ್ನು ಸಾರುವುದು. ಮಾನವೀಯತೆ, ಅಂತಃಕರಣ, ವಿನಯ, ಸರಳತೆಯಂತಹ ಮೌಲ್ಯಗಳನ್ನು ಮಾಸ್ತಿ ಎತ್ತಿ ಹಿಡಿದಿದ್ದಾರೆ. ಅವರ ಅನೇಕ ಕವನಗಳಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತಹ ಚರ್ಚೆಗಳು ನಡೆದಿವೆ. ಆಧ್ಯಾತ್ಮವೆಂಬುದು ಅಗೋಚರವಾದುದಲ್ಲ, ಸರಳತೆ-ಮಾನವೀಯತೆಗಳ ಆಚರಣೆಯೇ ಆಧ್ಯಾತ್ಮವೆಂದು ಅವರು ಸ್ಪಷ್ಟಪಡಿಸಿದ್ದಾರೆ. "ಅಗಡಿಯ ಸಾಧುಗಳು" ಕಥನಕವನದಲ್ಲಿ ಇದಕ್ಕೆ ಸಂಬಂಧಿಸಿದ ವಿವರಗಳನ್ನು ಕಂಡುಕೊಳ್ಳಬಹುದಾಗಿದೆ. ಬದುಕಿನಲ್ಲಿ ನಿರ್ಲಿಪ್ತತೆ, ಕರ್ತವ್ಯದಲ್ಲಿ ನಿಷ್ಠೆಯಿರಬೇಕೆಂದು

ಹೇಳಿದ ಮಾಸ್ತಿಯವರು ಡಾಂಭಿಕತನವಿಲ್ಲದ ಭಕ್ತಿಯನ್ನು ಆರಿಸಿಕೊಂಡವರು. ಮಾನವೀಯ ಅಂತಃಕರಣವೇ ಇವರ ಬದುಕು-ಬರೆಹಗಳಲ್ಲಿ ಕಾಣುವ ಮುಖ್ಯ ಆಕರವಾಗಿವೆ.

ಮಾಸ್ತಿಯವರ ಕಾವ್ಯದಲ್ಲಿ ಅನೇಕ ಮಿತಿಗಳೂ ಇವೆ. ಆದರೆ ಆ ಮಿತಿಗಳನ್ನು ದಾಟಬಲ್ಲ ಶಕ್ತಿ-ಸಾಧ್ಯತೆಗಳು ಅವರ ಕಾವ್ಯಕ್ಕಿದೆಯೆನಿಸುತ್ತದೆ. 'ಬಲಿ'ಯನ್ನು ವೈಭವೀಕರಿಸುವ ಮುಸಿಲಮ್ಮನಂತಹ ಕಥನ ಕವನಗಳು ಅಪಾಯಕಾರಿಯೆನಿಸುತ್ತವೆ. 'ಕೆರೆಗೆ ಹಾರ' ವನ್ನು ನೆನಪಿಸುವ ಈ ಜನಪದ ಕಥೆಯನ್ನು ಮಾಸ್ತಿಯವರು ಯಥಾವತ್ತಾಗಿಯೇ ನಿರೂಪಿಸಿದ್ದಾರೆ.

ಚೊಚ್ಚಿಲ ಬಸುರಿಯಾಗಿದ್ದ ಗೌಡನ ಸೊಸೆ ಮುಸಿಲಮ್ಮ ಪೂಜಾರಿಯ ಮಾತಿಗೆ ಮಾರೆಮ್ಮನಿಗೆ ಬಲಿಯಾಗುವುದು, ಆ ಬಲಿಪದ್ಧತಿಯನ್ನು ಲೇಖಕರು ವೈಭವೀಕರಿಸುವುದು, ಮುಸಿಲಮ್ಮ ಮಾರಿಗೆ ಬಲಿಯಾದುದರಿಂದಲೇ ಮಳೆ ನಿಂತು ಕೆರೆ ಒಡೆಯುವುದು ತಪ್ಪಿತೆಂದು ನಂಬಿಕೆ ಹುಟ್ಟುವುದು - ಈ ಎಲ್ಲಾ ಪ್ರಸಂಗಗಳು ಇಂದು ಅಪ್ರಸ್ತುತವೆನಿಸುತ್ತವೆ. ಅನೇಕರಿಗಾಗಿ ಒಬ್ಬರು ಬಲಿಯಾಗುವುದು, ಈ ಬಲಿದಾನವನ್ನು ಆದರ್ಶವೆಂದು ಹೇಳಿಕೊಳ್ಳುವುದು ಹಿಂದೂ ಸಂಸ್ಕೃತಿಯ ಕೆಲವು ಆಚರಣೆಗಳಲ್ಲಿ ಕಾಣಬಹುದಾದರೂ ಮಾಸ್ತಿಯವರಂತಹ ಜೀವಪರ ಕವಿಯೂ ಇದನ್ನೇ ಹಾಡಿ ಹೊಗಳುವುದು ಎಷ್ಟರಮಟ್ಟಿಗೆ ಸೂಕ್ತ ಎಂಬ ಪ್ರಶ್ನೆ ಸಜವಾಗಿಯೇ ಏಳುತ್ತದೆ.

ಮಾಸ್ತಿಯವರಲ್ಲಿ ಅನೇಕ ದ್ವಂದ್ವಗಳಿವೆ. ಬ್ರಿಟಿಷ್ ವಸಾಹತುಶಾಹಿಯನ್ನು ನೇರವಾಗಿ ವಿರೋಧಿಯಾಗಿಸುವ ಅವರು ಮೈಸೂರು ಅರಸರ ಆಸ್ಥಾನದ ಅಧಿಕಾರಿಯಾಗಿ ಆಳರಸರ ವ್ಯವಸ್ಥೆಯ ವಿರುದ್ಧ ಮೌನ ತಾಳುತ್ತಾರೆ. ಅಧಿಕಾರಶಾಹಿ ಎಲ್ಲಿಯೇ ಇರಲಿ ಅದನ್ನು ವಿರೋಧಿಸಬೇಕಾದುದು ಸೃಜನಶೀಲ ಕವಿಯೊಬ್ಬನ ಕರ್ತವ್ಯ. ಇಂತಹ ಅನೇಕ ಕರ್ತವ್ಯಲೋಪಗಳನ್ನು ಮಾಸ್ತಿಯವರು ಮಾಡಿದ್ದಾರೆ.

ಯಥಾಸ್ಥಿತಿಯನ್ನು ವೈಭವೀಕರಿಸಿ ತೃಪ್ತಿ ಪಟ್ಟುಕೊಳ್ಳುವುದರಿಂದಲೇ, ಮಾಸ್ತಿಯವರಿಂದ ಮಹತ್ವಾಕಾಂಕ್ಷೆಯ ಕಾವ್ಯ ಹುಟ್ಟಲಿಲ್ಲ. ಕುವೆಂಪು ಅವರ ಕಾವ್ಯದಲ್ಲಿರುವ ಸಂಘರ್ಷದ ಆಶಯವಾಗಲಿ, ಬೇಂದ್ರೆ ಕಾವ್ಯದಲ್ಲಿ ಕಾಣುವ ಅದ್ಭುತ ಪ್ರತಿಭೆಯಾಗಲಿ ಮಾಸ್ತಿಯವರಲ್ಲಿ ಕಾಣಿಸುವುದಿಲ್ಲ. ಹೀಗಾಗಿ ಅವರ ಕಾವ್ಯದಲ್ಲಿ ಹೊಸ ಪ್ರಯೋಗಗಳಿಗಾಗಲಿ, ಹೊಸರೀತಿಯ ಬೆಳವಣಿಗೆಗಾಗಲಿ ಅವಕಾಶಗಳಿಲ್ಲ. ಒಂದೇ ವಿಷಯವನ್ನು ಬೇರೆ ಬೇರೆ ರೂಪಗಳಲ್ಲಿ ಮತ್ತೆ-ಮತ್ತೆ ಹೇಳುವದರಿಂದ ಅಭಿವ್ಯಕ್ತಿ ನೀರಸವಾಗಿದೆ. ಕಾವ್ಯಧ್ವನಿ ವಿರಳವಾಗಿದೆ.

ಇಂತಹ ಮಿತಿಗಳನ್ನು ಗುರುತಿಸುವುದರಿಂದ ಮಾಸ್ತಿಯವರ ಬರವಣಿಗೆಯ ಮಹತ್ವ ಕಡಿಮೆಯಾಗುವುದಿಲ್ಲ. ನಾಲ್ಕೈದು ದಶಕಗಳ ಅವಧಿಯಲ್ಲಿ ಬರೆವಣಿಗೆ ಮಾಡಿ ತಮ್ಮದೇ ಆದ ಶೈಲಿಯನ್ನು ರೂಪಿಸಿ, ತಮ್ಮದೇ ಆದ ಛಾಪನ್ನು ಉಳಿಸಿ ಹೋಗಿರುವ ಮಾಸ್ತಿಯವರಿಗೆ ಕನ್ನಡ ನವೋದಯ ಕಾವ್ಯದಲ್ಲಿ ತನ್ನದೇ ಆದ ಸ್ಥಾನವಿದೆ. ಮೈಸೂರು ಪ್ರದೇಶದ ನಂಬಿಕೆಗಳು ಆಚರಣೆಗಳು, ಜನಪದ ಕಥೆಗಳು ಮಾಸ್ತಿಯವರಲ್ಲಿ ಹರಳುಗಟ್ಟಿ ಅವರ ಬರೆಹದ ಮೂಲಕ ಅಭಿವ್ಯಕ್ತಗೊಂಡಿವೆ. ಮಾಸ್ತಿಯವರನ್ನು ಬಿ. ಎಂ. ಶ್ರೀ ಯವರು "ನಾಡಿನ ಪ್ರೇಮ

ಪುತ್ಥಳಿ" ಎಂದು ಕರೆದರೆ, ಗೋಕಾಕರು ಅವರನ್ನು "ಮಾಸ್ತಿ ಕನ್ನಡದ ಆಸ್ತಿ" ಎಂದು ಕರೆದಿದ್ದಾರೆ. ಈ ಹೇಳಿಕೆಗಳಲ್ಲಿ ವೈಭವೀಕರಣವಿದ್ದರೂ, ಮಾಸ್ತಿಯಂತಹ ಲೇಖಕರು ಇವತ್ತಿನ ಸಂದರ್ಭಕ್ಕೆ ಹೇಗೆ ಪ್ರಸ್ತುತವಾಗುತ್ತಾರೆಂಬುದೇ ಮುಖ್ಯ ಸಂಗತಿಯಾಗುತ್ತದೆ. ಈ ಹಿನ್ನಲೆಯಲ್ಲಿ ಮಾಸ್ತಿಯವರ ಕೊಡುಗೆ ಇದ್ದೇ ಇದೆ.

## ಮಾಸ್ತಿಯವರ ಕಾವ್ಯಕೃತಿಗಳ ವಿವರಗಳು

| ಕ್ರ. ಸಂ. | ಕವನಸಂಕಲನದ ಹೆಸರು | ಪ್ರಕಟಿತ ವರ್ಷ |
|---|---|---|
| ೧. | ಬಿನ್ನಹ | ೧೯೨೨ |
| ೨. | ಅರುಣ | ೧೯೨೪ |
| ೩. | ತಾವರೆ | ೧೯೩೦ |
| ೪. | ಚೆಲುವು | ೧೯೩೧ |
| ೫. | ಮಲಾರ | ೧೯೩೩ |
| ೬. | ಗೌಡರಮಲ್ಲಿ | ೧೯೪೦ |
| ೭. | ರಾಮನವಮಿ | ೧೯೪೧ |
| ೮. | ಮೂಕನಮಕ್ಕಳು | ೧೯೪೩ |
| ೯. | ನವರಾತ್ರಿ ಭಾಗ - ೧ | ೧೯೪೪ |
| ೧೦. | ನವರಾತ್ರಿ ಭಾಗ - ೨ | ೧೯೪೫ |
| ೧೧. | ನವರಾತ್ರಿ ಭಾಗ - ೩ | ೧೯೪೬ |
| ೧೨. | ನವರಾತ್ರಿ ಭಾಗ - ೪ | ೧೯೪೮ |
| ೧೩. | ನವರಾತ್ರಿ ಭಾಗ - ೫ | ೧೯೫೩ |
| ೧೪. | ಸುನೀತಾ | ೧೯೪೬ |
| ೧೫. | ಮನವಿ | ೧೯೫೧ |
| ೧೬. | ಸಂಕ್ರಾಂತಿ | ೧೯೬೯ |
| ೧೭. | ಶ್ರೀರಾಮಪಟ್ಟಾಭಿಷೇಕ | ೧೯೭೨ |

# ಫ್ರೆಂಚ್ ವಸಾಹತು ಆಗಿದ್ದ ಕೇರಳದ ಮಯ್ಯಳಿಯ ಬದುಕನ್ನು ಬಿಂಬಿಸುವ 'ದೇವರ ವಿಕರಾಳಗಳು'

ಪಾರ್ವತಿ ಜಿ. ಐತಾಳ್

ಡಾ. ನಾ. ದಾಮೋದರ ಶೆಟ್ಟಿಯವರು ಅನುವಾದಿಸಿರುವ 'ದೇವರ ವಿಕರಾಳಗಳು' ಎಂಬ ಕಾದಂಬರಿಯ ಮೂಲವು ಮಲಯಾಳದ ಸುಪ್ರಸಿದ್ಧ ಕಾದಂಬರಿಕಾರರಾದ ಎಂ. ಮುಕುಂದನ್ ಅವರ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ 'ದೈವತ್ತಿಂಡೆ ವಿಕ್ರತಿಗಳ್' ಎಂಬ ಕೃತಿ. ಮುಕುಂದನ್ ಅವರ ಅತ್ಯಂತ ಪ್ರಬುದ್ಧ ಕೃತಿಯೆಂದು ಹೆಸರು ಪಡೆದಿರುವ ಈ ಕಾದಂಬರಿಯು ಹಿಂದೆ ಫ್ರೆಂಚರ ವಸಾಹತು ಆಗಿದ್ದ, ಅವರ ಹುಟ್ಟೂರು ಕೂಡಾ ಆಗಿದ್ದ ಮಯ್ಯಳಿ ಎಂಬ ಪುಟ್ಟ ಹಳ್ಳಿಯ ವರ್ತಮಾನದ ಬದುಕನ್ನು ಚಿತ್ರಿಸುತ್ತದೆ.

ಬಿಳಿಯರ ಕೈಯೊಳಗಿದ್ದು ಕಾಲಕ್ರಮೇಣ ಸ್ವತಂತ್ರವಾದ ಮಯ್ಯಳಿಯ ಒಟ್ಟು ಬದುಕಿನಲ್ಲಿ ಸಂಭವಿಸಿದ ಏರಿಳಿತಗಳೇ 'ದೇವರ ವಿಕರಾಳಗಳು' ಕಾದಂಬರಿಯ ಮುಖ್ಯ ಕಥಾವಸ್ತು. ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ನವ್ಯ ಶೈಲಿಯ ಕಾದಂಬರಿಗಳು. ಸೃಷ್ಟಿಯಾಗುತ್ತಿದ್ದ ಕಾಲದಲ್ಲೇ ಮುಕುಂದನ್ ಅವರು ಬರೆಯಲಾರಂಭಿಸಿದ್ದರೂ ಅವರ ಈ ಕಾದಂಬರಿಯು ಕೇವಲ ವ್ಯಕ್ತಿನಿಷ್ಠವಾದ ಒಂದು ಕಥೆಯನ್ನು ಹೊಂದಿರದೆ ಉದ್ದಕ್ಕೂ ಸಾಮಾಜಿಕ ಕಳಕಳಿಯಿಂದ ತುಂಬಿಕೊಂಡಿದೆ. ಅನ್ಯರ ಆಳ್ವಿಕೆಗೊಳಗಾಗಿ ಬದುಕಿನ ರೀತಿ-ನೀತಿಗಳು ಪೂರ್ತಿಯಾಗಿ ಬದಲಾಯಿಸಿಕೊಳ್ಳುವ ಮಯ್ಯಳಿಯಲ್ಲಿ ಕಾಣಿಸಿಕೊಳ್ಳುವ ದೇವರ ವಿಕರಾಳಗಳು ಮಯ್ಯಳಿಗೆ ಮಾತ್ರ ಸೀಮಿತವಾಗಿರದೆ ಕಾಲ-ದೇಶಗಳನ್ನು ಮೀರಿನಿಲ್ಲುವ ಸಾರ್ವಕಾಲಿಕ ಸತ್ಯವನ್ನು ಪ್ರಸ್ತುತಪಡಿಸುವುದೇ ಇಲ್ಲಿ ಕಾದಂಬರಿಕಾರರ ಉದ್ದೇಶವಾಗಿದೆ.

ತಾಳೆಮರದಿಂದ ಕಳ್ಳು ತಯಾರಿಸುವುದೇ ಪ್ರಧಾನ ವೃತ್ತಿಯಾಗಿರುವ ಬಿಲ್ಲವರಿಂದ ತುಂಬಿಕೊಂಡಿರುವ ಊರು ಮಯ್ಯಳಿ. ಕುಲದೈವವಾದ ಆದಿ ಬಿಲ್ಲವನ ಆರಾಧಕರಾದ ಬಿಲ್ಲವರು ಅವನಿಗಾಗಿ ಕಟ್ಟಿಸಿದ ಪುರಾತನ ದೇವಾಲಯ ಆದಿ ಬಿಲ್ಲವ ಕ್ಷೇತ್ರ. ಗುಡ್ಡಕಾಡುಗಳ ಹಸುರಿನಿಂದಾವೃತ ಸುಂದರ ಮಯ್ಯಳಿಯಲ್ಲಿ ಸಂತೃಪ್ತ ಬದುಕನ್ನು ನಡೆಸುತ್ತಿದ್ದ ಬಿಲ್ಲವರ ಜೀವನದಲ್ಲಿ ನಾಗರಿಕರೆಂದು ಹೇಳಿಕೊಳ್ಳುತ್ತಿದ್ದ ಬಿಳಿಯರ ಆಗಮನವು ಹಲವಾರು ಬದಲಾವಣೆಗಳನ್ನು ತಂದಿತು. ಹಣ ಮತ್ತು ಅದು ನೀಡುವ ಕ್ಷಣಿಕ ಸುಖದ ವ್ಯಾಮೋಹ ಹೆಚ್ಚಿತು. ಬಿಲ್ಲವರ ನಾಡಾದ ಮಯ್ಯಳಿಯಲ್ಲಿ ಬಿಳಿಯರಿಗೆ ಹುಟ್ಟಿದ ಆಂಗ್ಲೋ ಇಂಡಿಯನ್ನರ ಸಂತತಿ ಬೆಳೆಯುವುದರೊಂದಿಗೆ ಬಿಲ್ಲವರಿಗೆ ತಮ್ಮ ಕಪ್ಪು ಬಣ್ಣದ ಬಗ್ಗೆ ಕೀಳರಿಮೆಯೂ ಉಂಟಾಗ ತೊಡಗಿತು. ಹೀಗೆ ವಸಾಹತುಶಾಹಿಯ ದೇಶೀಯರ ಮೇಲೆ ಎಂತಹ ಪರಿಣಾಮ ಬೀರಿತು ಎನ್ನುವುದರ ಕುರಿತಾದ ಒಂದು ಸಮಗ್ರ ಚಿತ್ರಣವನ್ನು ನಮ್ಮ ಮುಂದೆ ತೆರೆದಿಡಲು

'ದೇವರ ವಿಕರಾಳಗಳು' ಪ್ರಾಮಾಣಿಕ ಪ್ರಯತ್ನ ನಡೆಸುತ್ತದೆ. ಈ ಪ್ರಯತ್ನದ ಹಾದಿಯಲ್ಲಿ ಅನೇಕ ಪರಿಣಾಮಕಾರಿ ಪಾತ್ರಗಳು ಹಾಗೂ ಸನ್ನಿವೇಶಗಳು ಸೃಷ್ಟಿಯಾಗಿವೆ.

ಕಾದಂಬರಿ ತೆರೆದುಕೊಳ್ಳುವಾಗ ನಮ್ಮ ಕಣ್ಣಿಗೆ ಬೀಳುವ ಪ್ರಮುಖ ಪಾತ್ರವೇ ಜಾದೂಗಾರ ಆಲ್ಫೋನ್ಸಯ್ಯನದು. ಆಂಗ್ಲೋ ಇಂಡಿಯನ್ ಆಗಿರುವ ಆಲ್ಫೋನ್ಸಯ್ಯನ ಹೆಂಡತಿ ಮಗ್ಗಿಬಾಯಿ, ಮಗ ಮೈಕೆಲ್ ಮತ್ತು ಮಗಳು ಎಲ್ಸಿ. ಬಿಳಿಯರು ಮಯ್ಯಳಿಯಲ್ಲಿದ್ದ ಕಾಲದಲ್ಲಿ ತನ್ನ ಜಾದೂ ಪ್ರದರ್ಶನದ ಮೂಲಕ ಅಪಾರ ಹಣ ಗಳಿಸಿ ಆರಾಮವಾಗಿ ದಿನಗಳೆಯುತ್ತಿದ್ದ ಆತನ ಆರ್ಥಿಕ ಪರಿಸ್ಥಿತಿ ಇಂದು ಹದಗೆಟ್ಟಿದೆ. ಬಿಳಿಯರು ತೊರೆದು ಹೋದ ಮಯ್ಯಳಿಯಲ್ಲಿ ಆತನ ಜಾದೂವಿದ್ಯೆಗೆ ಇಂದು ಬೆಲೆ ಕೊಡುವವರಿಲ್ಲ. ಅಷ್ಟು ಮಾತ್ರವಲ್ಲದೆ ಮಯ್ಯಳಿಯವರಿಗೆ ಆತನ ಕೆಂಚು ಕೂದಲಿನ ಬಗ್ಗೆ ತಿರಸ್ಕಾರವೂ ಇದೆ. ಒಂದೊಮ್ಮೆ ರಾಜನಾಗಿ ಮೆರೆದಿದ್ದ ಆಲ್ಫೋನ್ಸಯ್ಯನಿಗೆ ಇಂದು ಗಾಂಜಾದ ಹೊಗೆಯೊಳಗಿನ ಭ್ರಮಾತ್ಮಕ ಜಗತ್ತಿನಲ್ಲಿ ಮಾತ್ರ ಸೃಷ್ಟಿಕರ್ತನಾಗಿ ಮೆರೆಯುವ ಅವಕಾಶ. ಆದರೆ ಮೃದು ಹೃದಯಿಯಾದ ಆತನಿಗೆ ಮಕ್ಕಳೆಂದರೆ ಅಕ್ಕರೆಯೂ ಹೌದು. ಮಕ್ಕಳು ಎದುರಿಗೆ ಸಿಕ್ಕಿದಾಗಲೆಲ್ಲ ತರಿಕಲ್ಲುಗಳನ್ನು ಬಾಚಿ, ಮಂತ್ರಿಸಿ, ಮಿಠಾಯಿಗಳನ್ನಾಗಿ ಪರಿವರ್ತಿಸಿ ಕೊಡುವ ಆಲ್ಫೋನ್ಸಯ್ಯನ ಮಗಳಾದ ಎಲ್ಸಿಯ ಬಗ್ಗೆ ಮಯ್ಯಳಿಯ ಇತರ ಮಕ್ಕಳಿಗೆ ಅಸೂಯೆಯೂ ಇದೆ. ಜಾದೂವಿದ್ಯೆಯನ್ನು ಬಿಟ್ಟರೆ ಬೇರೇನೂ ಕೆಲಸ ಗೊತ್ತಿಲ್ಲದ ಆಲಸಿ ಗಂಡನ ಬಗ್ಗೆ ಮಗ್ಗಿಬಾಯಿಗೆ ತಾತ್ಸಾರವಿದೆ. ಸದಾ ಹಣ ಹಣವೆಂದು ಬಾಯಿ ಬಡಿದುಕ್ಕೊಳ್ಳುವ ಆಕೆಗೆ ಬಿಳಿಯರ ಸ್ವರ್ಗ ಸದೃಶ ಜೀವನವನ್ನು ತನ್ನದಾಗಿಸಿಕೊಳ್ಳುವ ಆಸೆ. ಈ ಮಹದಾಸೆಯೇ ಆಕೆಯನ್ನು ಹಣಕ್ಕಾಗಿ ಫ್ರಾನ್ಸಿನಲ್ಲಿ ಹಣಸಂಪಾದಿಸಿ ಶ್ರೀಮಂತನಾಗಿ ಮಯ್ಯಳಿಗೆ ತಿರುಗಿ ಬಂದು ನೆಲೆಸಿದ ಬಿಲ್ಲವ ಪುರುಷ ಧರ್ಮಪಾಲನೊಂದಿಗೆ ಸಂಬಂಧ ಬೆಳೆಸಲು ಪ್ರೇರೇಪಣೆ ನೀಡುತ್ತದೆ.

ಆಲ್ಫೋನ್ಸಯ್ಯನಷ್ಟೇ ಪ್ರಮುಖವೆನ್ನಿಸುವ ಇನ್ನೊಂದು ಪಾತ್ರ ಕುಮಾರನ್ ವೈದ್ಯರದು. ವಂಶಪಾರಂಪರ್ಯವಾಗಿ ಬಂದಿರುವ ವೈದ್ಯವೃತ್ತಿ ಅವರದ್ದು. ತಂದೆ ಕುಞ್ಞಿಕುಟ್ಟಿವೈದ್ಯರು. ಇಡೀ ಮಯ್ಯಳಿಯವರ ಎಲ್ಲಾ ರೋಗಗಳನ್ನು ವಾಸಿ ಮಾಡುತ್ತಿದ್ದ ಏಕಮಾತ್ರ ವೈದ್ಯರಾಗಿದ್ದರು. ಮಾತ್ರವಲ್ಲದೆ ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದರು. ಒಮ್ಮೆ ಗಾಂಧೀಜಿಯವರು ಮಯ್ಯಳಿಗೆ ಬಂದಿದ್ದಾಗ ಅವರ ಹಸ್ತಸ್ಪರ್ಶದಿಂದ ಪುಳಕಿತರಾದವರು ಅವರು. ಆದರೆ ಬಿಳಿಯರ ಪ್ರಭಾವದಿಂದಾಗಿ ಇಂದು ಜನರಿಗೆ ದೇಶೀಯ ಔಷಧಿಗಳಲ್ಲಿ ನಂಬಿಕೆ ಹೊರಟು ಹೋಗಿದೆ. ಸಾಮಾನ್ಯ ಶೀತ, ನೆಗಡಿ ಭೇದಿಗಳಿಗೂ ಇಂದು ಜನರು ಫ್ರಾನ್ಸಿನಲ್ಲಿ ವೈದ್ಯ ವೃತ್ತಿ ಕಲಿತು ಬಂದ ಡಾಕ್ಟರುಗಳ ಮೇಲೆ ಅವಲಂಬಿತರಾಗಿದ್ದಾರೆ. ತತ್ಪರಿಣಾಮವಾಗಿ ಕುಮಾರನ್ ವೈದ್ಯರ್ ಕೂಡಾ ಆರ್ಥಿಕವಾಗಿ ಕಷ್ಟ ಅನುಭವಿಸುತ್ತಿದ್ದಾರೆ. ಅದು ಸಾಲದೆಂಬಂತೆ ಅವರ ಪ್ರೀತಿಯ ಮಡದಿ ಕಮಲ ಅವಳಿ ಗುಂಡಮಕ್ಕಳಿಗೆ ಜನ್ಮವಿತ್ತು ಹೆರಿಗೆ ನೋವಿನಲ್ಲಿ ತೀರಿಕೊಂಡಿದ್ದಾಳೆ. ಎಳೆಯ ಮಕ್ಕಳಾದ ಶಶಿ ಮತ್ತು ಶಿವನ್ ಅವರನ್ನು ನೋಡಿಕೊಳ್ಳುವುದು ಕಷ್ಟವಾಗಿ ಕಂಡರೂ ಮರುಮದುವೆ ಮಾಡಿಕೊಳ್ಳಲು ಇಷ್ಟಪಡದ ಕುಮಾರನ್ ವೈದ್ಯರ 'ಕಮಲಪ್ರೇಮ'ದ ಅತಿಭಾವುಕತೆಯು ಆಲ್ಫೋನ್ಸಯ್ಯನ ಭ್ರಮಾತ್ಮಕ ಲೋಕದ ಇನ್ನೊಂದು

ರೂಪ. ಪತ್ನಿ ಪ್ರೇಮದ ಆದರ್ಶದ ಮರೆಯಲ್ಲಿ ಅಡಗಿ ಬೆಳೆಯುವ ಮಕ್ಕಳಿಗೆ ಸಿಗಬೇಕಾದ ಆರೋಗ್ಯಕರ ಕೌಟುಂಬಿಕ ವಾತಾವರಣದಿಂದ ಮಕ್ಕಳನ್ನು ವಂಚಿಸುವ ಕುಮಾರನ್ ವೈದ್ಯರ ಜೀವನ ದೃಷ್ಟಿಯು ಇನ್ನೊಂದು ರೀತಿಯ ಪಲಾಯನವಾದವೇ ಆಗಿರುತ್ತದೆ. ಪ್ರಾಯಶಃ ಈ ಎರಡು ಕುಟುಂಬಗಳ ಹಿರಿಯರ ಬೇಜವಾಬ್ದಾರಿತನಗಳು ಮಕ್ಕಳ ದುರಂತಕ್ಕೂ ಕಾರಣವಾಗುತ್ತವೆ. ಏನೂ ತಿಳಿಯದ ಎಳೆಯ ವಯಸ್ಸಿನಲ್ಲಿ ಆಲ್ಫೋನ್ಸಯ್ಯನ ಮಗಳು ಎಲ್ಸಿಯು ಆದಿಬಿಲ್ಲವನ ಮುಂದೆ ನಿಂತು ಶಿವನ್ ಮತ್ತು ಶಶಿಯರಿಬ್ಬರನ್ನು ಮದುವೆಯಾಗುತ್ತೇನೆಂದು ಪ್ರತಿಜ್ಞೆ ಮಾಡುವುದು, ಮುಂದೆ ಹೇಗಿದ್ದರೂ ಗಂಡನಾಗುವವನೆಂಬ ನಂಬಿಕೆಯಿಂದ ಎಲ್ಸಿಯು ಶಶಿಗೆ ತನ್ನೊಂದಿಗೆ ದೈಹಿಕ ಸಂಬಂಧ ಬೆಳೆಸಲು, ಅಪಾಯದ ಅರಿವಿಲ್ಲದೆಯೇ ಎಡೆಮಾಡಿಕೊಡುವುದು, ಹದಿಮೂರನೆಯ ವಯಸ್ಸಿನಲ್ಲಿಯೇ ಎಲ್ಸಿ ಗರ್ಭಧರಿಸುವುದು, ಗುಟ್ಟಾಗಿ ಗರ್ಭತೆಗೆಸಿದ ನಂತರ ಆಕೆ ಮುಂಕಾಗಿ ಬಿಟ್ಟು ಬದುಕಿನಲ್ಲಿ ಆಸಕ್ತಿ ಕಳೆದುಕೊಳ್ಳುವುದು, ಶಶಿ ಊರಿನಲ್ಲಿ ತಲೆಯೆತ್ತಲಾಗದೆ ತಪ್ಪಿಸಿಕೊಂಡು ಓಡಿಹೋಗುವುದು- ಇಷ್ಟೆಲ್ಲ ಅನಾಹುತಗಳಿಗೆ ಕಾರಣ ಹಿರಿಯರ ಅಜಾಗರೂಕತೆ ಮತ್ತು ಅವರು ಆ ಕಡೆ ಗಮನ ಹರಿಸದಿರಲು ಕಾರಣ ಅವರ ಬಡತನ ಮತ್ತು ಅದಕ್ಕೆ ಕಾರಣ ಬಿಳಿಯರ ಆಳ್ವಿಕೆಯಿಂದಾಗಿ ಪೂರ್ತಿಯಾಗಿ ಏರುಪೇರಾದ ಅವರ ಜೀವನ ರೀತಿಯೇ ಆಗಿದೆ.

ಬಿಳಿಯರ ನೀತಿಯನ್ನು ಎಲ್ಲಾ ಕಾಲದಲ್ಲೂ ವಿರೋಧಿಸಿ ತನ್ನ ಧರ್ಮ, ಸಂಸ್ಕೃತಿ ಹಾಗೂ ಸಂಪ್ರದಾಯಗಳನ್ನು ಉಳಿಸಿಕೊಳ್ಳಲು ಹೆಣಗಾಡುವ ಬಿಲ್ಲವರ ಮುಖಂಡನಂತಿರುವ ಆರುಪುರೆಕಡುಜ್ಜ ಆದಿಬಿಲ್ಲವನ ಪರಮಭಕ್ತ. ದೊಡ್ಡ ತರವಾಡಿನಲ್ಲಿ ಹುಟ್ಟಿ ಬೆಳೆದ ಆತನದೇ ರಕ್ತಸಂಬಂಧಿ ಕುಞ್ಞಾಮವಕೀಲ ಸ್ವಭಾವದಲ್ಲಿ ಆತನಿಗೆ ತದ್ವಿರುದ್ಧ. ಎಲ್ಲಾ ರೀತಿಯಲ್ಲೂ ಆತ ಬಿಳಿಯರ ಗುಲಾಮ. ವಕೀಲನಾದ ಆತನಿಗೆ ಬಿಳಿಯರ ಮತ್ತು ಆಂಗ್ಲೋ ಇಂಡಿಯನ್ನರ ಸ್ನೇಹ-ಸಹವಾಸಗಳೇ ಹೆಚ್ಚು. ಬಿಳಿಯರ ಜತೆಗೆ ದರ್ಪದಿಂದ ಮೆರೆದಾಡಿದ ಕುಞ್ಞಾಮ ವಕೀಲ ಬಿಳಿಯರು ಮಯ್ಯಳಿಯನ್ನು ಬಿಟ್ಟುಹೋದ ನಂತರ ನೀರಿನಿಂದ ಹೊರಬಿದ್ದ ಮೀನಿನಂತೆ ಚಡಪಡಿಸುತ್ತಾನೆ. ಆದರೆ ಇವರೀರ್ವರ ಮುಂದಿನ ತಲೆಮಾರುಗಳು ತಮ್ಮ ಹಿರಿಯರುಗಳ ನೀತಿಗೆ ವಿರುದ್ಧವಾಗಿ ಬೆಳೆಯುತ್ತವೆ. ಕಡುಜನಮಗ ರಾಹುಲ ಬಿಳಿಯರ ಭಕ್ತನಾದರೆ ಕುಞ್ಞಾಮ ವಕೀಲ ಬಲಾತ್ಕಾರದಿಂದ ಫ್ರಾನ್ಸಿಗೆ ಕರೆದೊಯ್ಯುವ ಆತನ ಇಬ್ಬರು ಮಕ್ಕಳು ಹೇಳದೆ ಕೇಳದೆ ತಮ್ಮ ಹುಟ್ಟೂರಿಗೆ ಮರಳುತ್ತಾರೆ. ಕಾದಂಬರಿಯ ಮೊದಲ ಭಾಗದಲ್ಲಿ ಕಡುಜ ಮತ್ತು ಕುಞ್ಞಾಮರ ಜೀವನ ದೃಷ್ಟಿ ಕೋನಗಳ ನಡುವಿನ ವೈಪರೀತ್ಯವನ್ನು ಹಾಸ್ಯ ಹಾಗೂ ವ್ಯಂಗ್ಯಮಿಶ್ರಿತವಾದ ಒಂದು ಸನ್ನಿವೇಶದ ಮೂಲಕ ಮಾರ್ಮಿಕವಾಗಿ ಹಿಡಿದಿಡಲಾಗಿದೆ. ಕಡುಜನಿಗೆ ಬಿಳಿಯರ ಮೇಲೆ ಸಿಟ್ಟಿದ್ದರೂ ತನ್ನ ಕಪ್ಪುಬಣ್ಣದ ಬಗ್ಗೆ ಕೀಳರಿಮೆಯಿದೆ. ತನ್ನ ಮೊದಲ ಮಡದಿ ಚೀರು ಬೆಳ್ಳಗಿದ್ದಳು. ಆದರೆ ಆಕೆಯನ್ನು ಕಾಡುತ್ತಿದ್ದ ಪ್ರೇತಬಾಧೆಯಿಂದಾಗಿ ಆತ ಆಕೆಯನ್ನು ದೂರಮಾಡಿ ಕರ್‍ರಗಿನ ಚಪ್ಪಿಲೆಯನ್ನು ವಿವಾಹವಾಗುತ್ತಾನೆ. 'ಚಪ್ಪಿಲೆ ಎಷ್ಟು ಕಪ್ಪಗಿದ್ದಳೆಂದರೆ ರಾತ್ರಿ ದೀಪವಾರಿಸಿದರೆ ಅವಳು ಕಾಣಿಸುವುದೇ ಇಲ್ಲ' ಎಂದು ಹೇಳುವ ಲೇಖಕರ ಹಾಸ್ಯದಲ್ಲಿ ಕಡುಜನ ಬೇಸರವೂ ಅಡಗಿದೆ. ಕುಞ್ಞಾಮನಿಗೆ ತನ್ನ ಹೆಂಡತಿ ಬೆಳ್ಳಗಿದ್ದಾಳೆಂಬ ಜಂಬವೂ ಇದೆ.

ಮಯ್ಯಳಿಯ ಈ ಎಲ್ಲ ಪ್ರತಿಷ್ಠಿತವರ್ಗದವರಿಗಿಂತ ಭಿನ್ನವಾಗಿ ಬೆಳೆದು ಬಂದ ಇನ್ನೊಂದು ಸಾಮಾನ್ಯವರ್ಗವಿದೆ. ಅದು ಬಿಳಿಯರ ಕಾಲದಿಂದಲೇ ಶೋಷಣೆ-ಅನ್ಯಾಗಳಿಗೊಳಗಾಗುತ್ತ ಬಂದ ಬಡ ದಲಿತವರ್ಗ. ಕುಂಜಿರುತೆಯೆಂಬ ಸೂಲಗಿತ್ತಿ, ಆಡುಗಳನ್ನು ಸಾಕುತ್ತ ಜೀವನ ಮಾಡುತ್ತಿದ್ದ ಚಾತ್ತು, ಕೊಡೆರಿಪೇರಿಯ ಚೋಯಿಯಣ್ಣ, ಕ್ಷೌರಿಕರಾಮ, ದಿನಸಿ ಅಂಗಡಿಯ ಅಸ್ಸನಾರೆ ಮುಂತಾದವರು ಈ ವರ್ಗದಲ್ಲಿ ಬರುತ್ತಾರೆ. ಇವರೆಲ್ಲರೂ ಶ್ರಮಜೀವಿಗಳು. ಊಟಕ್ಕೆ ಅಕ್ಕಿಕೊಳ್ಳಲೂ ಗತಿಯಿಲ್ಲದೆ ಉಪವಾಸ ವಿರುತ್ತಿದ್ದವರು. ಆದರೆ ಇವರ ಮುಂದಿನ ತಲೆಮಾರು ಫ್ರಾನ್ಸ್ ಮತ್ತು ದುಬೈಗಳಿಗೆ ಹೋಗಿ ಮೈಮುರಿದು ದುಡಿದು ಹೇರಳಹಣ ಸಂಪಾದಿಸಿ ಊರಿಗೆ ಬಂದು ಬಂಗಲೆಗಳನ್ನು ಕಟ್ಟಿಸಿ ಮಯ್ಯಳಿಯ ಮುಖವನ್ನೇ ಬದಲಾಯಿಸಿದವರು. ಕುಂಜಿರುತೆಯ ಮಗ ಮಾಧವ, ಕಪ್ಪುಕಣ್ಣನ ಮಗ ಫಲ್ಗುಣ, ಆಡು ಸಾಕುತ್ತಿದ್ದ ಚಾತ್ತುವಿನ ಮಗ ಧರ್ಮಪಾಲ, ಅಸ್ಸನಾರೆಯ ಮಗ ಮೂಸ್ಸಾ. ಇವರೆಲ್ಲರೂ ತಮ್ಮ ಹಿರಿಯರುಗಳ ಜೀವನರೀತಿಯನ್ನೇ ಬದಲಾಯಿಸುವವರಾಗುತ್ತಾರೆ.

ಈ ದಲಿತರಲ್ಲಿ ಕಮ್ಯೂನಿಸಂನ ತತ್ವಗಳಿಂದ ಪ್ರಭಾವಿತರಾಗಿ ಕ್ರಾಂತಿಕಾರಿಗಳಾದವರೂ ಇದ್ದಾರೆ. ಬಿಸಿರಕ್ತದ ತರುಣ ಮಾಧವ ಬಿಳಿಯರು ಇದ್ದಾಗ ಅವರ ದಬ್ಬಾಳಿಕೆಯನ್ನು ಪ್ರತಿಭಟಿಸಿ ಕೊಮ್ಮಿಸ್ಸಾರ್ ಎಂಬ ಆಂಗ್ಲೋ ಇಂಡಿಯನ್ನನನ್ನು ಚೂರಿಯಿಂದ ಇರಿದು ಕೊಲ್ಲಲು ಪ್ರಯತ್ನಿಸಿ ಪೋಲೀಸರಿಂದ ಬೆನ್ನಟ್ಟಲ್ಪಟ್ಟಿರುತ್ತಾನೆ. ಆ ಅಸಾಯಹಕ ಸ್ಥಿತಿಯಲ್ಲಿ ಪರೋಪಕಾರಿ ಕುಮಾರನ್ ವೈದ್ಯರ್ ಅವನಿಗೆ ಆಶ್ರಯ ಕೊಡುತ್ತಾರೆ. ಪರಿಣಾಮವಾಗಿ ಕುಮಾರನ್ ವೈದ್ಯರೇ ಒಮ್ಮೆ ಜೈಲಿಗೆ ಹೋದದ್ದಿದೆ. ಆನಂತರ ಕಾದಂಬರಿಯ ಕೊನೆಯಲ್ಲಿ ಪರಿಸ್ಥಿಯ ವ್ಯಂಗ್ಯವೆಂಬಂತೆ ಕುಮಾರನ್ ಅವರ ಮಗ ಶಿವನೇ ಕ್ರಾಂತಿಕಾರಿಯಾಗಿ ತನ್ನ ಸಂಗಾತಿಗಳೊಂದಿಗೆ ಸೇರಿ ಕಡುಜನನ್ನು ಇರಿದು ಕೊಲ್ಲುತ್ತಾನೆ. ಪೋಲೀಸರು ಅವನನ್ನು ಹುಡುಕುತ್ತಿದ್ದಾಗ, ದುಬೈಯಲ್ಲಿ ದುಡಿದು ಶ್ರೀಮಂತನಾಗಿ ಬಂದು ಬಂಗಲೆಯಲ್ಲಿ ವಾಸಿಸುತ್ತಿದ್ದ ಮಾಧವ ಶಿವನ್‌ಗೆ ಆಶ್ರಯಕೊಡುತ್ತಾನೆ. ಅವನನ್ನು ಉತ್ತಮ ಭವಿಷ್ಯಕ್ಕಾಗಿ ದುಬೈಗೆ ಕಳುಹಿಸುವ ಏರ್ಪಾಡು ಮಾಡುತ್ತಾನೆ. ಆದರೆ ಶಿವನ್‌ಗೆ ಹಣದ ಆಸೆಗಿಂತಲೂ ಆದರ್ಶವೇ ಮುಖ್ಯವಾಗಿ ಆತ ಮಾಧವನಿಗೆ ಹೇಳದೆ ಕೇಳದೆ ಹೊರಟುಹೋಗುತ್ತಾನೆ.

ಆಲ್ಫೋನ್ಸಯ್ಯನ ಕಥೆಯೂ ದುರಂತದಲ್ಲೇ ಕೊನೆಯಾಗುತ್ತದೆ. ಆತನ ದೊಡ್ಡಮಗಳು ಮೇರಿ ಪೋಲೀಸನ ಜೊತೆಗೆ ಬಹಳ ಮೊದಲೇ ಓಡಿ ಹೋಗಿರುತ್ತಾಳೆ. ಮಗ ಮೈಕೆಲ್ ಫ್ರಾನ್ಸಿಗೆ ಹೋಗಿ ಹಣಸಂಪಾದಿಸಿದರೂ ಕೆಟ್ಟ ಚಾಳಿಗೆ ಬಿದ್ದು ಬೇಜವಾಬ್ದಾರಿಯಿಂದ ಇದ್ದು ಹಿರಿಯರಿಗೆ ಸುಳ್ಳು ಹೇಳಿ ವಂಚಿಸುತ್ತಾನೆ. ತಂಗಿ ಎಲ್ಸಿಗೋಸ್ಕರ ಆತ ಕರೆದುಕೊಂಡು ಬರುವ ಡಕ್ಕಿಯೂ ಅವಳನ್ನು ಮದುವೆಯಾಗುವ ನಾಟಕವಾಡಿ, ಒಂದು ತಿಂಗಳ ಕಾಲ ಸುಖಪಟ್ಟು ಅವಳನ್ನು ಬಿಟ್ಟು ಫ್ರಾನ್ಸಿಗೆ ಹೊರಟುಹೋಗುತ್ತಾನೆ. ಅದೇ ಸಮಯದಲ್ಲಿ ಕುಡಿತಕ್ಕೆ ದಾಸನಾಗಿ ತನ್ನ ಬದುಕನ್ನೇ ಹಾಳು ಮಾಡಿಕೊಂಡ ಶಶಿ ಊರಿಗೆ ಮರಳಿರುತ್ತಾನೆ. ಆದ ಬಡವನೆಂದು ಆತನನ್ನು ಇದುವರೆಗೆ ತಾತ್ಸಾರದಿಂದ ಕಂಡಿದ್ದ ಮಗ್ಗಿಬಾಯಿಗೆ ಈಗ

ಪಶ್ಚಾತ್ತಾಪವಾಗುತ್ತದೆ. ಡಕ್ಕಿಯು ಮಗಳಿಗೆ ಜನ್ಮವೀಯುವ ಎಲ್ಸಿ ಕೊನೆಗೂ ವೇಶ್ಯೆಯಾಗುತ್ತಾಳೆ. ಶಶಿ ಆಲ್ಫೋನ್ಸಯ್ಯನ ದಾರಿ ಹಿಡಿದು ಮಕ್ಕಳಿಗೆ ತರಿಕಲ್ಲುಗಳಿಂದ ಮಿಠಾಯಿ ಮಾಡಿಕೊಡುವ ಮಾಂತ್ರಿಕನಾಗುತ್ತಾನೆ. ಹೀಗೆ ಆದಿ ಬಿಲ್ಲವ ಮತ್ತು ಮಯ್ಯಳಿ ಮಾತೆಯಿಂದ ಸದಾ ರಕ್ಷಿಸಲ್ಪಡುತ್ತಿರುವ ಮಯ್ಯಳಿಯಲ್ಲಿ ಕಾಣಿಸಿಕೊಳ್ಳುವ ದೇವರ ವಿಕರಾಳಗಳೆಡೆಗೆ ನವಿರಾದ ವ್ಯಂಗ್ಯದ ಮೂಲಕ ಮುಕುಂದನ್ ನಮ್ಮ ಗಮನ ಸೆಳೆಯುತ್ತಾರೆ.

ಭಾಷೆ ಹಾಗೂ ತಂತ್ರದ ದೃಷ್ಟಿಯಿಂದ ಯಾವುದೇ ಸಂಕೀರ್ಣ ವಿಧಾನದ ಬಳಕೆಗೆ ಮುಕುಂದನ್ ಹೋಗುವುದಿಲ್ಲ. ಕಥೆಯ ನಿರೂಪಣೆಯು ಅಜ್ಞಾತ ನಿರೂಪಕನ ಪ್ರಜ್ಞೆಯಲ್ಲೇ ಕೊನೆಯತನಕ ಮುಂದುವರೆಯುತ್ತದಾದರೂ ಮಧ್ಯಭಾಗದಲ್ಲಿ ಮಯ್ಯಳಿಯನ್ನು ಪ್ರವೇಶಿಸುವ ಪತ್ರಕರ್ತ ಹಾಗೂ ಲೇಖಕನಾದ ಕುಞ್ಞಿಕಣ್ಣನ್ ಇಡೀ ಮಯ್ಯಳಿಯ ಜನಜೀವನದ ಬಗ್ಗೆ ವಿವರಗಳನ್ನು ಒಟ್ಟು ಮಾಡುವ ಸನ್ನಿವೇಶವಿದೆ. ಅಲ್ಲದೆ ಕಾದಂಬರಿಯ ಕೊನೆಯಲ್ಲಿ ಕೂಡಾ ಹಲವು ದಶಕಗಳ ನಂತರ ಮಧ್ಯವಯಸ್ಸು ದಾಟಿದ ಕುಞ್ಞಿಕಣ್ಣನ್ ಕಲ್ಯಾಣಿ ಎಂಬ ವಿದ್ಯಾವಂತ ಸ್ತ್ರೀಯನ್ನು ಮದುವೆಯಾಗಿ ಆಕೆಯನ್ನು ಮಯ್ಯಳಿಗೆ ಕರೆದುಕೊಂಡು ಬಂದು ತಾನು ಅಲ್ಲಿ ಹಿಂದೆ ನೋಡಿದ್ದ ಸಂಗತಿಗಳನ್ನು ಮತ್ತು ಈಗ ಆಗಿರುವ ಪರಿವರ್ತನೆಗಳನ್ನು ಕುರಿತು ಆಕೆಗೆ ತಿಳಿಯ ಹೇಳುತ್ತಾನೆ. ಆದರೆ ಕುಞ್ಞಿಕಣ್ಣನ್ ಕಥೆಯ ನಿರೂಪಕನಾಗಿರದೆ ಮಯ್ಯಳಿಯ ಅಭಿಮಾನಿಗಳಲ್ಲೊಬ್ಬನಾಗಿರುವುದು ಕಥೆಯ ಮಿತಿಯನ್ನು ವಿಸ್ತರಿಸಿ ಸತ್ಯಗಳನ್ನು ಸಾಮಾನ್ಯೀಕರಿಸುವ ಉದ್ದೇಶದಿಂದಲ್ಲೂ ಆಗಿರಬಹುದೆಂದು ನನಗನ್ನಿಸುತ್ತದೆ. ಈ ದೃಷ್ಟಿಯಿಂದ ಓದುಗರು ಕುಞ್ಞಿಕಣ್ಣನಲ್ಲಿ ತಮ್ಮನ್ನು ಗುರುತಿಸಿಕೊಂಡು ಮಯ್ಯಳಿಯ ಏಳುಬೀಳುಗಳಿಗೆ ಸ್ಪಂದಿಸಬಹುದಾಗಿದೆ.

ಮಯ್ಯಳಿಯ ಇನ್ನೊಂದು ವೈಶಿಷ್ಟ್ಯವೆಂದರೆ ಅಲ್ಲಿ ಕಾಣಿಸುವ ಮತೀಯ ಸೌಹಾರ್ದತೆ. ಅಲ್ಲಿ ಕ್ರಿಶ್ಚಿಯನ್ನರ ಮಯ್ಯಳಿ ಮಾತೆಯಿದ್ದಾಳೆ. ಬಿಲ್ಲವರ ಆದಿಬಿಲ್ಲವನಿದ್ದಾನೆ, ಮುಸಲ್ಮಾನರ ಅಲ್ಲಾನೂ ಇದ್ದಾನೆ. ಆದರೆ ತಮ್ಮ ಕಷ್ಟಸುಖಗಳೆರಡರಲ್ಲೂ ಎಲ್ಲರೂ ಪರಸ್ಪರ ಸಹಕರಿಸುತ್ತ ಮೈತ್ರಿಯಿಂದಿರುವುದನ್ನು ನಾವು ಕಾಣುತ್ತೇವೆ. ಕಮ್ಯೂನಿಸಂನ ವರ್ಗಸಂಘರ್ಷದ ಕಿಡಿಗಳು ಅಲ್ಲಲ್ಲಿ ಕಾಣಿಸಿಕೊಂಡರೂ ಧಾರ್ಮಿಕ ಕಲಹಗಳಾಗಲೀ ಕೋಮು ಗಲಭೆಗಳಾಗಲೀ ಅಲ್ಲಿ ಸಂಭವಿಸುವುದಿಲ್ಲ.

ಆಲ್ಫೋನ್ಸಯ್ಯ ಮತ್ತು ಕುಮಾರನ್ ವೈದ್ಯರ ಪಾತ್ರಗಳಲ್ಲಿ ಫ್ಯಾಂಟಸಿ ಮಹತ್ವದ ಪಾತ್ರವಹಿಸುತ್ತದೆ. ಅವರು ನಂಬಿಕೊಂಡು ಬಂದ ಆದರ್ಶಗಳಲ್ಲಿ ಪರಸ್ಪರ ಸೌಮ್ಯವೂ ಇದ್ದು ಇವು ಅಭ್ಯಾಸ ಯೋಗ್ಯ ಪಾತ್ರಗಳಾಗಿವೆ. ಉಳಿದಂತೆ ಮಗ್ಗಿಬಾಯಿ ಮತ್ತು ಕುಂಜಿರುತೆಯ ಪಾತ್ರಗಳಿಗೆ ಪ್ರಾಮುಖ್ಯ ನೀಡಲಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಇಲ್ಲಿ ಮಯ್ಯಳಿಯೇ ಒಂದು ಸಜೀವಪಾತ್ರವಾಗಿ ಎದ್ದು ಕಾಣುತ್ತದೆ. ಮಯ್ಯಳಿಯ ಪ್ರತಿಯೊಂದು ಭಾಗಕ್ಕೂ ಅದರದ್ದೇ ಆದ ಮಹತ್ವವಿರುವುದರಿಂದ ಲೇಖಕರು 'ಮಯ್ಯಳಿಗಾಳಿ' 'ಮಯ್ಯಳಿ ಮಣ್ಣು', 'ಮಯ್ಯಳಿ ಸೂರ್ಯ' ಎಂಬ ವಿಶೇಷಣಗಳನ್ನು ಪದೇ ಪದೇ ಉಪಯೋಗಿಸುತ್ತಾರೆ.

ಡಾ. ನಾ. ದಾ. ಶೆಟ್ಟಿಯವರ ಭಾಷಾಶೈಲಿಯ ಬಗ್ಗೆ ಎರಡು ಮಾತುಗಳನ್ನು ಸೇರಿಸುವುದು ಈ ಅನುವಾದದ ವಿಮರ್ಶೆಯಲ್ಲಿ ಹೆಚ್ಚು ಪ್ರಸ್ತುತವೆಂದು ನನಗನ್ನಿಸುತ್ತದೆ. ನಾ. ದಾ. ಅವರು ಇಲ್ಲಿ ಅನುವಾದಕ್ಕೆ ತಮ್ಮ ಹುಟ್ಟೂರಾದ ಕಾಸರಗೋಡಿನ ಕನ್ನಡ ಆಡು ಮಾತಿನ ಶೈಲಿಯನ್ನು ಉಪಯೋಗಿಸಿದ್ದಾರೆ. ಈ ವೇಗದ ಯುಗದಲ್ಲಿ ಪರಸ್ಪರ ಸಂಪರ್ಕ, ವರ್ಗಾವಣೆ, ವಲಸೆ ಹೋಗುವಿಕೆಗಳು ಹೆಚ್ಚಾಗುತ್ತಿರುವ ಕಾರಣ ಒಂದು ಪ್ರದೇಶಕ್ಕೆ ಸೀಮಿತವಾದ ಭಾಷೆಗಳು ತಮ್ಮ ವೈಶಿಷ್ಟ್ಯಗಳನ್ನು ಕಳೆದುಕೊಂಡು ಕೆಲವು ಶಬ್ದಗಳೇ ಮರೆಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ದಾಖಲೆಗಳಲ್ಲಾದರೂ ಅವು ಜೀವಂತವಾಗಿ ಉಳಿಯಬೇಕಾದ ತುರ್ತು ಇಂದು ಇದೆ. ಈ ದೃಷ್ಟಿಯಿಂದ ಇನ್ನಾವುದೇ ಕನ್ನಡ ಕಾದಂಬರಿಗಳಲ್ಲಿ ಉಪಯೋಗಿಸಲ್ಪಡದೇ ಇರುವ ವಿಶಿಷ್ಟ ಶೈಲಿಯೊಂದನ್ನು ಅವರು ಬಳಸಿರುವುದು ಸ್ತುತ್ಯರ್ಹ. ಅಲ್ಲದೆ ಕಾಸರಗೋಡು ಕೇರಳದ ಒಂದು ಭಾಗವೇ ಆಗಿರುವುದರಿಂದ, ಅಲ್ಲಿನ ಆಡುಮಾತಿನಲ್ಲಿ ಅನೇಕ ಮಲಯಾಳ ಪದಗಳು ಹಾಸುಹೊಕ್ಕಾಗಿ ಸೇರಿಕೊಂಡು ಬಿಟ್ಟಿರುವುದರಿಂದ ಮಲಯಾಳ ಕೃತಿಯೊಂದರ ಅನುವಾದಕ್ಕೆ ಅದು ಹೆಚ್ಚು ಮಾರಕವೂ ಆಗಿರುತ್ತದೆ. ಸಂಭಾಷಣೆಗಳ ಸಂದರ್ಭದಲ್ಲಿ ಆಡುಭಾಷೆಯಲ್ಲಿ ಅರ್ಧ ಉಚ್ಚಾರಿತವಾಗುವ ಅಥವಾ ಪೂರ್ತಿಲೋಪವಾಗುವ ಅಕ್ಷರಗಳನ್ನು ಅದೇ ರೀತಿ ಬರೆದುಬಿಡುವುದು ಮಲಯಾಳ ಭಾಷಾ ಶೈಲಿಯ ಒಂದು ವೈಶಿಷ್ಟ್ಯ. ಎಂ. ಟಿ. ವಾಸುದೇವನ್ ನಾಯರ್ ಅವರ ಕಥೆ ಕಾದಂಬರಿಗಳಲ್ಲಿ ಇದಕ್ಕೆ ಯಥೇಚ್ಛವಾಗಿ ಉದಾಹರಣೆಗಳು ಸಿಗುತ್ತವೆ. ಇಲ್ಲಿ ನಾ. ದಾ. ಅವರು ಅದೇ ಶೈಲಿಯ ಯಥಾಪ್ರತಿಯನ್ನು ಕನ್ನಡಕ್ಕೆ ತರಲು ಪ್ರಯತ್ನಿಸಿದ್ದಾರೆ. ಅಪರೂಪಕ್ಕೆ ಅಲ್ಲಲ್ಲಿ ಅನುವಾದವು ಶಾಬ್ದಿಕವಾಗಿ ಕಂಡು ಬಂದರೂ ಒಂದು ದೊಡ್ಡ ಕಾದಂಬರಿಯನ್ನು ಅನುವಾದಿಸುವಾಗ ಇಂತಹ ತಪ್ಪುಗಳು ನುಸುಳಿ ಹೋಗುವುದು ಸ್ವಾಭಾವಿಕ. ಆದರೆ ಕೃತಿಯ ಒಟ್ಟಂದಕ್ಕೆ ಇದಿರಂದಾಗಿ ಯಾವುದೇ. ಭಂಗ ಉಂಟಾಗಿಲ್ಲ. ಸರಳ ಹಾಗೂ ಸಹಜ ಶೈಲಿಯಲ್ಲಿ ಓದುಗರ ಕುತೂಹಲ ಕೆರಳಿಸಿಕೊಂಡು ಹೋಗುವ ಇಂತಹ ಒಂದು ಗಂಭೀರ ಕೃತಿಯನ್ನು ಕನ್ನಡಕ್ಕೆ ತರಲು ಡಾ. ನಾ. ದಾ. ಅವರು ಪಟ್ಟಿರುವ ಶ್ರಮ ನಿಜವಾಗಿಯೂ ಅಭಿನಂದನೀಯ.

| | | |
|---|---|---|
| ಕೃತಿಯ ಹೆಸರು | : | ದೇವರ ವಿಕರಾಳಗಳು (ಕಾದಂಬರಿ) |
| ಅನುವಾದಕರು | : | ಡಾ. ನಾ. ದಾಮೋದರಶೆಟ್ಟಿ |
| ಮೂಲ ಮಲಯಳ | : | ಎಂ. ಮುಕುಂದನ್ |
| ಪ್ರಕಾಶಕರು | : | ಕೇಂದ್ರ ಸಾಹಿತ್ಯ ಅಕಾಡೆಮಿ |
| ಪ್ರಥಮ ಮುದ್ರಣ | : | ೨೦೦೦ |
| ಪುಟಗಳ ಸಂಖ್ಯೆ | : | ೫೫೯ |
| ಬೆಲೆ | : | ೧೨೦ ರೂ. |

# ಲಂಕೇಶರ ಸಂಕ್ರಾಂತಿಯಲ್ಲಿ ಬಸವ ಬಿಜ್ಜಳರ ನಡುವಿನ ತಾತ್ವಿಕ ಸಂಘರ್ಷ : ಒಂದು ವಿಶ್ಲೇಷಣೆ

ಟಿ. ಯಲ್ಲಪ್ಪ

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನ ನೇತೃತ್ವದಲ್ಲಿ ವೀರಶೈವ ಧರ್ಮದ ಪುನರ್ ನಿರ್ಮಾಣಕ್ಕಾಗಿ ನಡೆದ ವೀರಶೈವ ಚಳುವಳಿ ಒಂದು ಧಾರ್ಮಿಕ ಚಳುವಳಿ. ಕನ್ನಡ ಸಾಹಿತ್ಯ ಚರಿತ್ರೆಯ ಇತಿಹಾಸದಲ್ಲಿಯೂ ಇದೊಂದು ಅಪೂರ್ವವಾದ ಘಟನೆ. ಆದರೆ ಇದು ಕೇವಲ ಒಂದು ಧಾರ್ಮಿಕ ಚಳುವಳಿಯಾಗಿ ಮಾತ್ರ ಉಳಿಯದೆ ಅದೊಂದು ಧಾರ್ಮಿಕ, ಸಾಂಸ್ಕೃತಿಕ ಚಳುವಳಿಯಾಗಿ ವ್ಯಾಪಕತೆಯನ್ನು ಪಡೆದು ಕೊಂಡದ್ದು ಭಾರತೀಯ ಇತಿಹಾಸದಲ್ಲೇ ಒಂದು ಅಪರೂಪದ ಪ್ರಸಂಗ; ವರ್ಗರಹಿತ ಸಮಾಜದ ನಿರ್ಮಾಣ, ಕಾಯಕ, ದಾಸೋಹ, ಇಂತಹ ಮಹಾನ್ ಸಿದ್ಧಾಂತಗಳ ಆವಿಷ್ಕಾರ, ಅನುಷ್ಠಾನ ಗಳೊಂದಿಗೆ, ವ್ಯಕ್ತಿಯನ್ನು ಅವನ ಜಾತಿಯಿಂದ ಗುರುತಿಸುವುದನ್ನು ಬಿಟ್ಟು ಅವನು ಮಾಡುವ ಕೆಲಸದಿಂದ ಗುರುತಿಸಬೇಕೆಂಬ ಆಲೋಚನೆಯ ಮೂಲಕ ಹೊಸ ಸಮಾಜದ ಕನಸು ಮೂಡಿಸಿದವನು ಬಸವಣ್ಣ .

ಪ್ರತಿಯೊಬ್ಬನೂ ಕನಿಷ್ಟ- ಗರಿಷ್ಠ ಎಂಬ ಬೇಧವಿಲ್ಲದೆ labour clasification & statusco ಇಲ್ಲದೆ, ಸಮಾನವಾಗಿ ಗುರುತಿಸುವ ಪರಿಪಾಠ ಶುರುವಾಯಿತು. ಹೊಲೆಯನೂ ಕೂಡಾ ಶಿವಶರಣನಾಗಬಹುದು, ಭಗವಂತ- ಭಕ್ತಿ ಹಾಗೂ ಮುಕ್ತಿ ಇವು ಉತ್ತಮ ಜಾತಿಯವರ ಸ್ವತ್ತಲ್ಲ ಎಂಬ ನಿರಾಕರಣೆಯ ಮೂಲಕ, ಭಕ್ತಿ-ಮುಕ್ತಿಗಳ ಹೊಸ ಮಾರ್ಗದ ಹರಿಕಾರನಾದ ಬಸವಣ್ಣ ಇಷ್ಟಲಿಂಗ, ಕರಸ್ಥಲ ಲಿಂಗಗಳ ಆವಿಷ್ಕಾರವನ್ನು ಮಾಡಿದನು. ಆದರೆ ಶತಮಾನಗಳಷ್ಟು ಹಿಂದಯೇ ಸಂಪ್ರದಾಯ ಜಡವಾದ ಈ ಸಮಾಜದಲ್ಲಿ ತನ್ನ ಅಪೂರ್ವ, ಮುಂಗಾಣ್ಕೆ ಹಾಗೂ ದರ್ಶನಗಳ ಮೂಲಕ ಅಂದಿನ ಸಮಾಜಕ್ಕಿಂತ ಶತಮಾನಗಳಷ್ಟು ಮುಂದಿದ್ದ ಅವರ ಆಲೋಚನೆ, ಚಿಂತನೆ ಹಾಗೂ ಕೈಗೊಂಡ ಸುಧಾರಣೆಗಳು ತುಂಬಾ ಪ್ರಗತಿಪರವಾಗಿದ್ದವು ಎಂಬ ಕಾರಣಕ್ಕಾಗಿ ಕೂಡಾ ಬಸವಣ್ಣ ಅಂದಿನ ಹಿಂದೂ ಧಾರ್ಮಿಕ ಮೂಲಭೂತವಾದಿಗಳ ಕಣ್ಣಿಗೆ ಸಂಪ್ರದಾಯ ವಿರೋಧಿಯಾಗಿ ಕಂಡು ಬಂದದ್ದು ಆಶ್ಚರ್ಯಕರವಾದ ವಿಷಯವೇನೂ ಅಲ್ಲ. ಒಂದು ಕಡೆ ಸಂಪ್ರದಾಯ ಜಡ ವೈದಿಕರಿಂದ ಟೀಕೆ, ಮತ್ತೊಂದು ಕಡೆ ಬಸವಣ್ಣನ ವ್ಯಕ್ತಿತ್ವದ ಕೇಂದ್ರದಲ್ಲಿ ಆಕರ್ಷಿಸಲ್ಪಟ್ಟಿದ್ದ ಅವನ ಅನುಯಾಯಿಗಳಿಗೆ ಆತನ ಪ್ರಗತಿಪರ ಕಾರ್ಯಗಳನ್ನು ವೈಭವೀಕರಿಸುವ ಅಥವಾ ಅವನ್ನು ಅತಿಮಾನವ ನೆಲೆಗೆ ಕೊಂಡೊಯ್ದು ಪವಾಡವಾಗಿಸುವ ಗೀಳು ಇವೆರಡರ ಮಧ್ಯೆ ಅವನಿಗೆ ದೊರೆತ ಜನಬೆಂಬಲ ಇವು ಬಸವನ ವಾಸ್ತವವಾದ ಬದುಕನ್ನು ಎಷ್ಟೋ ಸಂದರ್ಭದಲ್ಲಿ ಮಸುಕು ಮಾಡಿದವು.

ಬಿಜ್ಜಳನ ಆಸ್ಥಾನದಲ್ಲಿ ಬೊಕ್ಕಸದ ಅಧಿಕಾರಿಯಾಗಿದ್ದ ಬಸವಣ್ಣ ತಮ್ಮ ಶಿವಶರಣರ ಉದ್ಧಾರಕ್ಕಾಗಿ ಬೊಕ್ಕಸದ ಹಣವನ್ನು ದುರುಪಯೋಗ ಮಾಡಿದನೆಂಬ

ಸನಾತನಿಗಳ ಆರೋಪಕ್ಕೆ ತಲೆಕೆಡಿಸಿಕೊಳ್ಳದ ಬಿಜ್ಜಳ ಬಸವನ ಬಗ್ಗೆ ಯಾವುದೇ ರೀತಿಯ ಕ್ರಮ ಕೈಗೊಳ್ಳದೆ ಮೌನವಹಿಸಿದ. ಆದರೆ ಬಸವಣ್ಣ ಶಿವಶರಣರಲ್ಲಿ ಒಬ್ಬನಾದ ಹೊಲೆಯ ರುದ್ರ ಬ್ರಾಹ್ಮಣ ಕನ್ಯೆಯ ಮೇಲೆ ಅತ್ಯಾಚಾರ ಮಾಡಿ ಧರ್ಮಸಂಕರವಾಗಿದೆಯೆಂದು, ಎಲ್ಲರೂ ಒಟ್ಟಾಗಿ ಹುಯ್ಯಲೆಬ್ಬಿಸಿದಾಗ ಬಿಜ್ಜಳ ಮೂಲಭೂತವಾದಿಗಳ ಪ್ರತಿನಿಧಿಯ ಹಾಗೆ ವರ್ತಿಸುತ್ತಾನೆ. ಸಂಕ್ರಾಂತಿಯ ದಿನ ಸೂರ್ಯ ತನ್ನ ಪಥ ಬದಲಿಸುವದಿನ, ಗರ್ಭಿಣೀ ಭೂಮಿತಾಯಿಗೆ ರಕ್ತದ ನೈವೇದ್ಯವಾಗಬೇಕೆಂಬ ರೂಢನಂಬಿಕೆಗೆ ಪಕ್ಕಾದವನೆಂಬಂತೆ, ರುದ್ರನ ತಲೆದಂಡವಾಗಬೇಕೆಂಬ ತೀರ್ಮಾನದೊಂದಿಗೆ ಅವನು ಸನಾತನಿಗಳ ಪಕ್ಷವಹಿಸುತ್ತಾನೆ.

ಆದರೆ ಅವನು ಅದೇ ಕಾಲಕ್ಕೆ ಬಸವನ ವಿರೋಧವನ್ನೂ ಏಕಾಏಕಿಯಾಗಿ ಕಟ್ಟಿ ಕೊಳ್ಳುವಷ್ಟು ದಡ್ಡನೂ ಆಗಿಲ್ಲ, ಬಸವಣ್ಣನ ವಿರೋಧವನ್ನು ಕಟ್ಟಿಕೊಳ್ಳುವುದೆಂದರೆ ಸಹಸ್ರಾರು ಸಂಖ್ಯೆಯಲ್ಲಿರುವ ಶೂದ್ರರು ಹೊಲೆಯರು- ಪರಿವರ್ತಿತ ಶರಣಸಮುದಾಯದ ವಿರೋಧವನ್ನೂ ಕಟ್ಟಿಕೊಳ್ಳಬೇಕಾಗುತ್ತದೆಯೆಂಬ ಅರಿವು ಅವನಿಗಿದೆ. ಅದಕ್ಕೇ ಅವನು ಸಮಯ ಸಾಧಕ ರಾಜಕಾರಣಿಯ ಹಾಗೆ ತುಂಬಾ ಚಾಣಾಕ್ಷತನದಿಂದ ನಡೆದುಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಬಸವಣ್ಣನನ್ನು ನೇರವಾಗಿ ಕರೆಸಿ ಮಾತಿಗಿಳಿಯುವ ಬಿಜ್ಜಳ ಕತ್ತರಿಯಲ್ಲಿ ಸಿಲುಕಿದ ಅಡಕೆಯ ಹಾಗೆ ಒದ್ದಾಡುತ್ತಾನೆ, ಬಸವ- ಬಿಜ್ಜಳರ ನಡುವೆ ಈ ಸಮಯದಲ್ಲಿ ನಡೆಯುವ ಸಂಭಾಷಣೆ ಅವರಿಬ್ಬರ ನ್ನಡುವಿನ ತಾತ್ವಿಕ ಸಂಘರ್ಷವನ್ನು ಅನಾವರಣಗೊಳಿಸುತ್ತದೆ. ಇತಿಹಾಸಕಾರನಾಗಲಿ ಪುರಾಣಕಾರನಾಗಲಿ ಕಟ್ಟಿಕೊಡಲಾಗದ ಅನ್ಯಾದೃಶವಾದಂತಹ ಒಂದು ತಾತ್ವಿಕ ಸನ್ನಿವೇಶವನ್ನು ಸಂಕ್ರಾಂತಿ ನಾಟಕದಲ್ಲಿ ಲಂಕೇಶರು ಕಟ್ಟಿಕೊಟ್ಟಿದ್ದಾರೆ.

ಬಸವ ಬಿಜ್ಜಳರ ನೇರ ಮುಖಾಮುಖಿಯಲ್ಲಿ ಬಸವಣ್ಣ- ಬಿಜ್ಜಳನಿಗೆ ನನ್ನ ಮೇಲೆ ಬೊಕ್ಕಸದ ಹಣ ಕದ್ದಿದ್ದೇನೆ ಎಂಬ ಆರೋಪ ಬಂದಾಗಲೂ ಯಾಕೆ ಕರೆಸಿ ಕೇಳಲಿಲ್ಲ, ಅಥವಾ ತಲೆದಂಡ ವಿಧಿಸಲಿಲ್ಲ? ಎಂಬ ಪ್ರಶ್ನೆಯನ್ನು ಹಾಕಿ ಅದಕ್ಕೆ ಉತ್ತರವನ್ನೂ ತಾನೇ ಹೇಳುತ್ತಾನೆ, ಯಾಕೆಂದರೆ ಬಸವಣ್ಣ ಬಿಜ್ಜಳನಿಗೆ ಬೇಕು. ಬಸವಣ್ಣನ 'ತಲೆದಂಡ' ತೆಗೆದುಕೊಂಡು ಅಪಾರ ಸಂಖ್ಯೆಯ ಶಿವಶರಣರ ವಿರೋಧವನ್ನು ಕಟ್ಟಿಕೊಳ್ಳುವುದು ಮೂರ್ಖತನ ಎಂದು ಅವನಿಗೆ ತಿಳಿದಿತ್ತು, ಬಿಜ್ಜಳನೇ ಹೇಳುವ ರೀತಿಯಲ್ಲಿ ಬಸವಣ್ಣನ ಬಗ್ಗೆ ಚಾಡಿ ಹೇಳಿದವರು ಸಾವಿರವಾದರೆ, ಶಿವಶರಣರು ಹತ್ತು ಸಾವಿರ ಇದ್ದರು. ಬಸವಣ್ಣನಿಗಿರುವ ಈ ಜನಪ್ರಿಯತೆ ಹಾಗೂ ಶಿವಶರಣರ ಬೆಂಬಲ ತನಗಿಲ್ಲವೆಂಬ ಅರಿವಾದಾಗ ಬಿಜ್ಜಳನಿಗೆ ಅದೊಂದು ರೀತಿಯ ಅವಮಾನ ಹಾಗೂ ರಾಜಕೀಯವಾಗಿ ತಾನು ಅಂತಂತ್ರನಾಗಿದ್ದೇನೆಂದು ಅನ್ನಿಸಿ ಕೆಂಡಮಂಡಲವಾಗುತ್ತಾನೆ. ಅವನು ಬಸವಣ್ಣನೆ ದುರಿಗೇನೆ "ಈ ರಾಜ್ಯದ ದೊರೆ ನಾನೋ ಬಸವಣ್ಣನೋ ಎಂಬ ಗುಮಾನಿ ಶುರುವಾಗ್ತದೆ" ಎಂದು ಹೊಟ್ಟೆಕಿಚ್ಚು ಪಡುತ್ತಾನೆ.

ಬಿಜ್ಜಳ ಜನರನ್ನು ಮಂತ್ರ ಮುಗ್ಧರನ್ನಾಗಿಸಲು ಹಾಗೂ ತನ್ನ ಆಡಳಿತದ ಬಗ್ಗೆ

ಜನ ತಲೆದೂಗುವಂತೆ ಮಾಡಲು ತನ್ನ ಭಟ್ಟನ ಮುಖಾಂತರ ಹೇಳಿಸಿದ ಅಗ್ನಿ ರಾಜನ ಕಥೆಯಲ್ಲಿ ಬೇಕಂತಲೇ ಕೈಬಿಟ್ಟ ಅಂಶಗಳನ್ನು ಬಸವಣ್ಣ ಬಿಜ್ಜಳನೆದುರೇ ಬಯಲಿಗೆಳೆದು ಮುಖಭಂಗ ಮಾಡುತ್ತಾನೆ. ಆ ಕಥೆಯಲ್ಲಿ ಯವ್ವನೋನ್ಮಾದದಿಂದ ನರಳುತ್ತಿದ್ದ ಸ್ವಂತ ಮಗಳಲ್ಲಿ ಅನುರಕ್ತನಾದ ಅಗ್ನಿರಾಜ- ಈ ದೇಶದ ಸುಂದರವಾದ ವಸ್ತು ಯಾರಿಗೆ ಸೇರಬೇಕೆಂದು, ರಾಜ್ಯದಲ್ಲಿ ಡಂಗೂರ ಸಾರಿಸಿದಾಗ ಪ್ರಜೆಗಳೆಲ್ಲಾ ಆ ವಸ್ತು ದೇಶದ ಪ್ರಭುವಿಗೆ ಸೇರಬೇಕೆಂದು ತೀರ್ಪು ನೀಡಿದ್ದರು. ಆ ಪ್ರಕಾರ ರಾಜ ಸ್ವಂತ ಮಗಳನ್ನೇ ಪ್ರಜಾಭಿಪ್ರಾಯದಿಂದ ಪಡೆದಿದ್ದ, ಬಿಜ್ಜಳ ಅಗ್ನಿರಾಜನ ಹಾಗೆ ಪ್ರಜಾಭಿಪ್ರಾಯವನ್ನು ಸ್ವಂತ ಸುಖಕ್ಕೆ ಬಳಸಿಕೊಳ್ಳುವಷ್ಟು ಭ್ರಷ್ಟನಾಗಿಲ್ಲವೆಂದು, ಬಸವಣ್ಣನೆದುರು ಜಂಬ ಕೊಚ್ಚಿಕೊಂಡಾಗ ಬಸವಣ್ಣ, ಬಿಜ್ಜಳನು ಕಥೆಯನ್ನು ತಿರುಚಿದ್ದನ್ನು ಬಯಲುಮಾಡಿದ್ದ .

ಅದೆಂದರೆ, ಅಗ್ನಿರಾಜ ಮೊದಲು ಅಭಿಪ್ರಾಯ ಕೇಳಿದ್ದು ಆ ದೇಶದ ಪ್ರಜೆಗಳನ್ನಲ್ಲ ಆ ದೇಶದ ಸುಶಿಕ್ಷಿತರನ್ನು. ಆದರೆ ಅವರಿಂದ ಒಪ್ಪಿಗೆ ದೊರೆಯದಿದ್ದಾಗ ಅವರನ್ನು ಗಡಿಪಾರು ಮಾಡಿದ್ದ. ಆಮೇಲೆ ಮಗಳನ್ನು ನಿರಾಂತಕವಾಗಿ ಮದುವೆಯಾಗಿದ್ದ, ಎಂಬ ಅಂಶವನ್ನು ಬಿಜ್ಜಳ ಅಗ್ನಿರಾಜನ ಕಥೆಯಿಂದ ಕಿತ್ತು ಹಾಕಿದ್ದ ಎಂಬ ಅಂಶ ಬಯಲಾದಾಗ ಬಿಜ್ಜಳ ಕಥೆ ಯಾಕೋ ತನ್ನ ಆಳಕ್ಕೇ ಇಳಿದಿತ್ತೆಂಬ ಸಂವೇದನೆಗೆ ಒಳಗಾಗುತ್ತಾನೆ. ತನ್ನ ಅನುಕೂಲಕ್ಕೆ ತಕ್ಕ ಹಾಗೆ ಇಡೀ ವ್ಯವಸ್ಥೆಯನ್ನೇ ತಿರುಚುವ ಬಿಜ್ಜಳನ ಅನುಕೂಲ ಸಿಂಧು ತನವನ್ನು ಬಸವಣ್ಣ ಬಯಲು ಮಾಡಿದಾಗ ಬಿಜ್ಜಳನು ಪೆಚ್ಚುಪೆಚ್ಚಾಗಿ ಆ ವಿಷಯಕ್ಕೆ ತಿಲಾಂಜಲಿ ನೀಡಿ ವಿಷಯಾಂತರ ಮಾಡ್ತಾನೆ.

ಇತ್ತೀಚೆಗೆ ತಾನೆ ರಾಜ್ಯದಲ್ಲಿ ನಡೆದ ಕೊಲೆಯೊಂದರ ಹಿಂದೆ ಶರಣರ ಕೈವಾಡವಿದೆಯೆಂದು, ನೇರವಾಗಿ ಆರೋಪಿಸುವ ಬಿಜ್ಜಳನನ್ನು ಬಸವಣ್ಣ ನಿರ್ದಾಕ್ಷಿಣ್ಯವಾಗಿ ಮೂರ್ಖ ಅಂತಾನೆ, ಈ ಕೊಲೆಯನ್ನು ಮಾಡಿದವರು ಬ್ರಾಹ್ಮಣರೆಂದು ಬಸವಣ್ಣನಿಗೆ ಚೆನ್ನಾಗಿ ತಿಳಿದಿತ್ತು. ಇದು ಬಸವಣ್ಣನಿಗೆ ತಿಳಿದಿದ್ದಾದರೂ ಹೇಗೆಂದು ಬಿಜ್ಜಳ ಆಶ್ಚರ್ಯ ಚಕಿತನಾದಾಗ ಜನರೊಡನಾಡುವ ತನಗೆ ಅವರ ಉಸಿರಿನ ಲಯಬದ್ಧತೆ ಕೂಡಾ ಅರ್ಥವಾಗುವಾಗುತ್ತದೆ,ಇಂಥ ಕ್ಷುಲ್ಲಕ ವಿಷಯವನ್ನು ಅರ್ಥಮಾಡಿಕೊಳ್ಳಲಾಗದ ಮೂರ್ಖತನ ತನಗಿಲ್ಲೆಂದು ಮುಖಭಂಗ ಮಡುತ್ತಾನೆ ಬಸವಣ್ಣ. ತಮ್ಮಿಬ್ಬರ ಸಂಬಂಧ ತೀರಾ ಹದಗೆಡುವ ಮೊದಲೇ ತನ್ನನ್ನು ಅಧಿಕಾರದಿಂದ ಮುಕ್ತಗೊಳಿಸಬೇಕೆಂದು ಒತ್ತಾಯ ಮಾಡುವ ಬಸವ, ಆ ಮೂಲಕ ತನ್ನ ಮನಸಿನ ಚಂಚಲ ಸ್ಥಿತಿಯಿಂದ ಮುಕ್ತಗೊಳಿಸಿ ಕೊಂಡು ಭಕ್ತಿಯ ಕೇಂದ್ರದಲ್ಲಿ ಬಂಧಿಸಿಕೊಳ್ಳುವ ಕಾರಣವನ್ನು ಮುಂದೊಡ್ಡುತ್ತಾನೆ.

ಆದರೆ ಬಸವಣ್ಣನನ್ನು ಅಧಿಕಾರದಿಂದ ವಿಮುಕ್ತಿಗೊಳಿಸಲು ಬಿಜ್ಜಳನಿಗೆ ಇಷ್ಟವಿಲ್ಲ. ಅದಕ್ಕಿಂತಲೂ ಅವನು ಬಸವ ಕೇಂದ್ರದಲ್ಲಿ ಸುತ್ತುವ ಅಯಸ್ಕಾಂತದ ಹಾಗೆ, “ ನೀವಿಲ್ಲದೆ ನನಗೆ ಬದುಕಿಲ್ಲ” ಎನ್ನುವ ಬಿಜ್ಜಳ ಬಸವಣ್ಣನನ್ನು ತಾನು ಎಂಥೆಂಥ ಸಂದರ್ಭಗಳಲ್ಲಿ ಸಹಿಸಿಕೊಂಡಿದ್ದೇನೆ ಎಂಬುದನ್ನು ಹೇಳ್ತಾನೆ; ತಾನೆಷ್ಟು ಬಸವನಿಗೆ ಅಡಿಕ್ಟ್ ಆಗಿದ್ದೇನೆ

ಎನ್ನುವುದನ್ನು ತಿಳಿಸುತ್ತಾ, " ದೇವಸ್ಥಾನದ ಒಳಗೆ ಕಾಲಿಡದ, ಶರಣರಲ್ಲದವರ ಮನೆಯತ್ತ ತಿರುಗಿ ಕೂಡಾ ನೋಡದ, ಬಿದ್ದ ಬಸದಿಗಳನ್ನು ಕಟ್ಟಿಸದ ಬಸವಣ್ಣನ ವಿರುದ್ಧ ತಾನು ಚಕಾರ ಎತ್ತಲಿಲ್ಲ ವೆಂದು ಬಸವಣ್ಣನನ್ನು ತನ್ನತ್ತ ಒಲಿಸಿಕೊಳ್ಳಲೆಳಸುವ ಬಿಜ್ಜಳ "ನೀವು ಇಲ್ಲಿಂದ ಹೋದ್ರೆ ಸಹಸ್ರಾರು ಶರಣರು ತಬ್ಬಲಿ ಆಗ್ತಾರೆ" ಎನ್ನುವ ಬಿಜ್ಜಳ ಕೊಡುವ ಕಾರಣದಿಂದ ಬಸವಣ್ಣ ಬಿಜ್ಜಳನ ಬೊಕ್ಕಸದಿಂದ ಶರಣರನ್ನು ಸಾಕುತ್ತಿದ್ದು, ಶರಣರು ಅನಾಥವಾಗಲಿರುವ ಕಾರಣದಿಂದಾದರೂ ಬಸವಣ್ಣ ತನ್ನೊಡನೆ ತನ್ನ ಅಧಿಕಾರದಲ್ಲಿ ಉಳಿಯ ಬೇಕೆಂಬ ಬಿಜ್ಜಳನ ಮಾತು ಬಸವಣ್ಣನ ಮೇಲಿರುವ ಆರೋಪದ ನೆಪದಿಂದ ಚುಚ್ಚುವಂತಹ ಮಾತನ್ನು ಆಡುತ್ತಾನೆ. ಬಸವಣ್ಣ ತನಗೆ ಅಧಿಕಾರದಲ್ಲಿ ನಂಬಿಕೆ ಇಲ್ಲವೆಂದಾಗ ಬಿಜ್ಜಳ ತನಗೆ ಯಾವುದರಲ್ಲಿ ನಂಬಿಕೆ ಇಲ್ಲದಿದ್ದರೂ ತನ್ನ ಅಧಿಕಾರದಲ್ಲಿ ನಂಬಿಕೆ ಇದೆ ಎನ್ನುವ ಬಿಜ್ಜಳ ತನ್ನ ಅಧಿಕಾರ ಲಾಲಸೆಯನ್ನು ವ್ಯಕ್ತಪಡಿಸುತ್ತಾನೆ.

ಬಿಜ್ಜಳ ಶರಣರುದ್ರನಿಗೆ ಬ್ರಾಹ್ಮಣರ, ವೀರಶೈವರ, ಆಗ್ರಹದ ಮೇರೆಗೆ ತಲೆದಂಡ ವಿಧಿಸಬೇಕೆಂಬ ಬೇಡಿಕೆಗೆ ಮಣಿದು, ತನ್ನ ರಾಜಕೀಯದ ಬೇಳೆ ಬೇಯಿಸಿಕೊಳ್ಳಲು ಬಳಸಲಿರುವ ಹಿಂಸಾತಂತ್ರ, ರಕ್ತದಾಹ ಅರ್ಥವಿಲ್ಲದ್ದೆಂದು ಬಸವಣ್ಣ ಅಸಹನೆಯನ್ನು ವ್ಯಕ್ತಪಡಿಸಿದಾಗ ಬಿಜ್ಜಳ ಹಿಂಸೆಯನ್ನು ಪ್ರತಿಪಾದಿಸುತ್ತಾನೆ. ಮತ್ತು ತನ್ನ ನಿಲುವನ್ನೇ ಸಮರ್ಥಿಸಿಕೊಳ್ಳುತ್ತಾನೆ. ಹಿಂಸೆ ಪ್ರಕೃತಿ ಸಹಜವಾದ ಒಂದು ಸಹಜವಾದ ಒಂದು ಪ್ರಕ್ರಿಯೆ ಎಂಬುದನ್ನು ಪ್ರತಿಪಾದಿಸಲು ಹಲವಾರು ನೈಸರ್ಗಿಕವಾದ ಉದಾಹರಣೆಗಳನ್ನು ನೀಡುತ್ತಾನೆ." ಮುಂಗಾರಲ್ಲಿ ಹೊಡೆವ ಸಿಡಿಲಿಗೆ ಹಿಂಸೆ, ಅಹಿಂಸೆಯ ಪರಿವೆಯಿಲ್ಲ! ಉಕ್ಕುವ ಸಮುದ್ರ ಸಾವಿರಾರು ಜೀವಗಳನ್ನು ಕೊಂದು, ಹಿಂಸೆ ಅಹಿಂಸೆಯ ತೊಳಲಾಟವಿಲ್ಲದೆ ಹಿಂದಕ್ಕೆ ಸರಿಯುತ್ತದೆ. ಬಿರುಗಾಳಿಗೆ ಸಿಕ್ಕಮರ ಬಿದ್ದೊಡನೆ ಅಕ್ಕಪಕ್ಕದ ಹಕ್ಕಿಪಕ್ಷಿಗಳು ನೆಲಕ್ಕೆ ಬಿದ್ದು ಸಾಯುತ್ತವೆ. ಭೂಮಿಯ ಒಡಲಿನಿಂದ ಕತ್ತು ಚಾಚುವ ಸಸಿಗಳು ಹಲವೊಮ್ಮೆ ಶಕ್ತಿ ಸಾಲದೆ ಕಮರಿ ಹೋಗುತ್ತವೆ" ಎಂದು ತನ್ನ ನಿಲುವನ್ನೇ ಸಮರ್ಥಿಸುವ ಬಿಜ್ಜಳನ ಈ ತರ್ಕಬದ್ಧವಾದ ವಾದಸರಣಿಯನ್ನು ಬಸವಣ್ಣ ಒಪ್ಪಲು ಸಿದ್ಧನಿಲ್ಲ. ಮನುಷ್ಯ ಜಗತ್ತನ್ನು ಬಿಟ್ಟು ಬಿಜ್ಜಳ ನಿಸರ್ಗದ ಸಂಕೇತಗಳಲ್ಲಿ ಮುಳುಗುತ್ತಿದ್ದಾನೆಂದು ಪ್ರಬಲವಾಗಿ ವಿರೋಧಿಸುತ್ತಾನೆ; ಬಿಜ್ಜಳನ ಈ ಉದಾರಣೆಗಳು ವಾಸ್ತವ ವಿದೂರವಾದುವೆಂದು, ಹಾಗೂ ಸಮುದ್ರ, ಬಿರುಗಾಳಿ,ಬಿರುಮಳೆಗಳ ಉದಾಹರಣೆಗಳಲ್ಲಿ ವಾಸ್ತವ ಸ್ಥಿತಿಯಿಂದ ತಪ್ಪಿಸಿಕೊಳ್ಳುವುದಕ್ಕೆ ಮನುಷ್ಯನಿಗೆ ಮಾತ್ರ ಸಾಧ್ಯ:

ಪ್ರಕೃತಿಯಲ್ಲಿ ಹಿಂಸೆ ಸಹಜವಾದ ಒಂದು ಪ್ರಕ್ರಿಯೆಯಾಗಿದ್ದರೂ ನಿರ್ಸದತ್ತವಾದ ಒಂದು ವಾಸ್ತವಿಕ ಸಂಗತಿಯಾದರೂ ಸಹಾ ಅಲ್ಲಿ ಬಿಜ್ಜಳನ ರಾಜ್ಯದಲ್ಲಿದ್ದ ಹಾಗೆ ತಾರತಮ್ಯದಿಂದ ಕೂಡಿರುವುದಾಗಿರುವುದಿಲ್ಲ ಎಂಬುದನ್ನು ಬಸವಣ್ಣ ಅಷ್ಟೇ ಸಮರ್ಥವಾಗಿ ಬಿಜ್ಜಳನ ಹಿಂಸೆಯ ಸಮರ್ಥನೆಯನ್ನು ಖಂಡಿಸುವ ಬಸವಣ್ಣ ತನ್ನ ವಾದಸರಣಿಯನ್ನು ಪ್ರತಿಪಾದಿಸುತ್ತಾನೆ. ಹುಲಿಗಳ ಜಗತ್ತಿನಲ್ಲಿ ಬಡಹುಲಿ, ಶ್ರೀಮಂತಹುಲಿ, ಪುರೋಹಿತ ಹುಲಿ, ಹೊಲೆಯ ಹುಲಿ ಇರುವುದಿಲ್ಲ; ಇದೆಲ್ಲ ಮನುಷ್ಯರಲ್ಲಿ ಮಾತ್ರ. ಸಮುದ್ರಕ್ಕೆ ಕೂಡಾ ಮೇಲು ಕೀಳಿನ ಪರಿವೆಯಿಲ್ಲ. ಸೂರ್ಯ ಅರಮನೆ, ದೇವಸ್ಥಾನಗಳ ಮೇಲೆ

ಮಾತ್ರ ಬೆಳಗುವುದಿಲ್ಲ. ಇದೆಲ್ಲಾ ಯಾಕೆಂದರೆ ಇದ್ಯಾವ ಕ್ರಿಯೆಗಳು ಮನುಷ್ಯನ ಕೈಯಲ್ಲಿ ಇಲ್ಲ ಎಂಬ ಕಾರಣದಿಂದಲೇ. ಈ ಸರ್ವಸಮಾನತೆಯ ಭಾವನೆ ವ್ಯಕ್ತವಾಗಲು ಸಾಧ್ಯವಾಗಿದೆ. ಒಂದು ಪಕ್ಷ ಈ ನೈಸರ್ಗಿಕ ಪ್ರಕ್ರಿಯೆಗಳು ಮಾನವನ ಹಿಡಿತದಲ್ಲಿದ್ದಿದ್ದರೆ ಮನುಷ್ಯ ಅಲ್ಲೂ ತಾರತಮ್ಯ ನೀತಿಯನ್ನು ಸಾಧಿಸಿಬಿಡುತ್ತಿದ್ದ ಎಂಬ ಬಸವಣ್ಣನ ಅರ್ಥಪೂರ್ಣವಾದ ವಾದಸರಣಿಗೆ ಸೋತ ಬಿಜ್ಜಳ ಬಸವನೆದುರು ತರ್ಕದ ಸೋಲಿನಿಂದ ಪೆಚ್ಚುನಗೆ ಬೀರಿದರೂ ಸೋಲನ್ನೊಪ್ಪಿಕೊಳ್ಳದ ಬಿಜ್ಜಳ ಎಡಬಿಡಂಗಿಯ ಹಾಗೆ ವಿತಂಡ ವಾದವನ್ನು ಮಂಡಿಸುತ್ತಾನೆ.

ಅವನ ಪ್ರಕಾರ ತಮ್ಮಿಬ್ಬರ ಇಂತಹ ವರ್ಗೀಕರಣಗಳನ್ನು ವಾದವಿವಾದಗಳನ್ನು ಮೀರಿ, ಜೀವಶಕ್ತಿ ಸ್ವಯಂಭೂ ಆಗಿ ಉಕ್ಕುತ್ತದೆಯೆಂದು. ಇದಕ್ಕೆ ಅಡ್ಡಿ ಬರುವಂತಹವರು ಜೀವವಿರೋಧಿ ಗಳೆಂದೂ ತನ್ನ ಮಾರ್ಗಕ್ಕೆ ವಿಚಾರಕ್ಕೆ ಬಸವಣ್ಣ ಅಡ್ಡಿ ಬರುತ್ತಿದ್ದಾನೆಂಬುದನ್ನು ಬಿಜ್ಜಳ ಪ್ರತಿಪಾದಿಸುತ್ತಾನೆ. ಹೀಗೆ ಅವರಿಬ್ಬರದೂ ತೀರಾ ವಿರುದ್ಧವಾದ ತಾತ್ವಿಕ ಧೋರಣೆಗಳ ಸಂಘರ್ಷಾತ್ಮಕ ವಿಚಾರಧಾರೆಗಳ ಮುಖಾಮುಖಿಯನ್ನು ಈ ಪ್ರಸಂಗದಲ್ಲಿ ಕಾಣಬಹುದಾಗಿದೆ.

ಮುಂದೆ ಬಿಜ್ಜಳ ರುದ್ರನನ್ನು ತನ್ನ ಅರಮನೆಗೆ ಕರೆಸಿಕೊಂಡು ಉಷಾಳ ಬಗ್ಗೆ ತನಿಖೆ ನಡೆಸುವಾಗ; ಬಿಜ್ಜಳ ಒಬ್ಬ ಕ್ರಿಮಿನಲ್ ಕೇಸನ್ನು ಡೀಲ್‌ಮಾಡುವ ಲಾಯರ್‌ನ ಹಾಗೆ ತನ್ನ ಜಾಣ್ಮೆ, ವ್ಯಂಗ್ಯ ಕುಯುಕ್ತಿಗಳೆಲ್ಲವನ್ನೂ ಉಪಯೋಗಿಸುತ್ತಾನೆ. ರುದ್ರ-ಉಷಾಳ ಸಂಬಂಧದ ಸ್ವರೂಪದಲ್ಲಿ ಪ್ರೇಮದ ಛಾಯೆ ಇದೆ ಎಂಬುದನ್ನು ಬಿಜ್ಜಳ ತಿಳಿದವನಾಗಿದ್ದರೂ ರುದ್ರನ ಮೇಲಿರುವ ಅತ್ಯಾಚಾರದ ಆರೋಪವನ್ನೇ ಸಾಬೀತು ಪಡಿಸಲು ಪೂರ್ವತಯಾರಿ ಆಗಿ ಬಂದ ಲಾಯರ್‌ನ ಹಾಗೆ ವಾದಿಸುತ್ತಾನೆ. ಬಿಜ್ಜಳ ಹೇಳಿ ಕಳಿಸಿದ್ದರೂ ಅರಮನೆಗೆ ಬರದ ಉಷಾಳ ಬಗ್ಗೆ ವಿಚಾರಿಸುತ್ತಾ, ನಿನ್ನ 'ಹೆಂಡತಿ' ಯಾಕೆ ಬರಲಿಲ್ಲ ಎಂದು ಕೇಳುತ್ತಾನೆ. ತಮ್ಮಬ್ಬರಿಗಿನ್ನೂ ಮದುವೆಯಾಗಿಲ್ಲವೆಂಬ ರುದ್ರನ ಮಾತಿನ ನಂತರ," ನೀನು ಮದುವೆಯಾಗಬೇಕಾದ ಹುಡುಗಿ" ಬರದೇ ಇರುವುದಕ್ಕೆ ಕಾರಣವೇನೆಂದು, ತನ್ನ ಹಳೆಯ ಮಾತಿನ ಧೋರಣೆಯನ್ನು ತಕ್ಷಣ ಬದಲಾಯಿಸಿಕೊಂಡು ಕೇಳುವ ಬಿಜ್ಜಳ ಅವಳು ಬೇಟೆಗೆ ಹೋಗಿದ್ದಾಳೆಂಬ ಮಾತಿಗೆ–ಇದು ಬ್ರಾಹ್ಮಣ ಹುಡುಗಿಯೊಬ್ಬಳು ಬೇಟೆಗೆ ಹೋದ ಮೊದಲ ಪ್ರಸಂಗವೋ ಎರಡನೆಯ ಪ್ರಸಂಗವೋ ಎಂದು ಬಸವಣ್ಣನ ಕಡೆ ವ್ಯಂಗ್ಯದಿಂದ ನೋಡುವ ಬಿಜ್ಜಳನ ವ್ಯಂಗ್ಯ ಬಿಜ್ಞಾಸೆ ನಿರಂತರವಾಗಿ ಮುಂದುವರಿಯುತ್ತದೆ. ಉಷಾ ಎನ್ನುವ ಬ್ರಾಹ್ಮಣ ಕನ್ಯೆ ಇದೇ ಮೊದಲ ಬಾರಿ ಬೇಟೆಗೆ ಹೋಗಿದ್ದರೂ ಆಕೆಯ ಮೊದಲ ಬೇಟೆ ರುದ್ರನೇ ಎನ್ನುವ ಬಿಜ್ಜಳನ ಮಾತಿನಲ್ಲಿ "ರುದ್ರ ಆಕೆಯ ಮೊದಲ ಬಲಿ" ಎನ್ನುವ ಗೂಢಾರ್ಥ ತುಂಬಿರುವುದೂ ವೇದ್ಯವಾಗುತ್ತದೆ.

ನಾಟಕದ ಉದ್ದಕ್ಕೂ ಬಿಜ್ಜಳನೆದುರು ಬಸವಣ್ಣ ಸುಳಿದಾಗ ಆಗಲಿ; ಶಿವಶರಣರು ಕಾಣಿಸಿಕೊಂಡಾಗ ಆಗಲಿ; ಬ್ರಾಹ್ಮಣರು ಬಸವಣ್ಣನಿಂದ ದೀಕ್ಷೆಪಡೆದ ದಲಿತ ಶರಣರಿಂದ ತಮ್ಮ ಧರ್ಮ ಹಾಳಾಗಿದೆ ಎಂದಾಗ ಆಗಲಿ; ಬಿಜ್ಜಳನಿಗೆ ನಿಜವಾದ ಶರಣ ಯಾರು?

ಶರಣತ್ವದ ಗುರುತೇನು? ಎಂಬ ಹಲವಾರು ಪ್ರಶ್ನೆಗಳು ಕಾಡುತ್ತವೆ. ಅವನದನ್ನು ಕೊನೆಗೆ ಬಸವಣ್ಣನೆದುರೇ ರುದ್ರನಿಗೂ ಈ ಪ್ರಶ್ನೆಯನ್ನು ಬಿಜ್ಜಳ ಹಾಕ್ತಾನೆ. 'ಎಲ್ಲ ಗುರುತನ್ನು ಕಿತ್ತೊಗೆಯುವುದೇ ಶರಣತನ' ಎಂಬ ಮಾತು ರುದ್ರನ ಬಾಯಿಂದ ಬರುತ್ತಿರುವಾಗಲೇ ಆ ಮಾತಿನ್ನೂ ಪೂರ್ಣವಾಗುವ ಮೊದಲೇ "ಅದನ್ನು ಬಸವಣ್ಣ ಹೇಳ್ದಾ ಅಲ್ಲವೆ?" ಎಂದು ರುದ್ರನ ಶರಣತ್ವಕ್ಕೆ ಸ್ವಂತಿಕೆಯ ಅಭಿವ್ಯಕ್ತಿಯಾಗಲಿ, ಸ್ವಸಮರ್ಥನೆಯ ಸಾಮರ್ಥ್ಯವಾಗಲಿ ಇಲ್ಲದೆ ಕೇವಲ ಬಸವಣ್ಣನಿಂದ ಪರಾವಲಂಬಿತವಾದುದೆಂಬ ತನ್ನ ಪೂರ್ವಗ್ರಹದ ಮಾತುಗಳಿಂದ ಅವಮಾನ ಪಡಿಸುತ್ತಾನೆ. ಎಲ್ಲ ಗುರುತನ್ನು ಕಿತ್ತೊಗೆದು ಮೂರ್ತತೆಯಿಂದ ಸಾಧ್ಯವಾದಷ್ಟು ಅಮೂರ್ತತೆಯ ಕಡೆಗೆ ಸಾಗುವ ಒಂದು ಪ್ರಕ್ರಿಯೆಯೇ ಶರಣತ್ವ' ಎಂಬ ಬಸವಣ್ಣನ ಚಿಂತನ ಸರಣಿ ಬಿಜ್ಜಳನಿಗೆ ಅರ್ಥವಾಗುವುದಿಲ್ಲ.

ರುದ್ರನಿಗೆ ಉಷಾಳ ಬಗ್ಗೆ ಇರೋದು ಪ್ರೇಮಾನೋ, ಕಾಮಾನೋ ತಿಳಿಯದಷ್ಟು ಮುಗ್ಧತೆ, ಆದರೆ ಅದಕ್ಕೆ ಅತ್ಯಾಚಾರದ ಬಣ್ಣ ಕಟ್ಟಿ ಆರೋಪಿಯ ಕಟಕಟೆಯಲ್ಲಿ ಅವನನ್ನು ನಿಲ್ಲಿಸಿ, ಸಂಕ್ರಾಂತಿಯ ನೆಪದಲ್ಲಿ ಗರ್ಭಿಣಿಯಾದ ಭೂತಾಯಿಗೆ ಅವನ ಬಲಿನೀಡಿ ರಕ್ತಚೆಲ್ಲಬೇಕೆಂಬ ಬಿಜ್ಜಳನ ಬಯಕೆಯನ್ನು ಬಸವಣ್ಣ ಪ್ರಬಲವಾಗಿ ಪ್ರತಿಭಟಿಸಿ ಛೀಮಾರಿ ಹಾಕ್ತಾನೆ. ಏಕೆಂದರೆ ಮುಗ್ಧನಾದ ರುದ್ರನಿಗೆ ತನ್ನ ಮತ್ತು ಉಷಾಳ ನಡುವಿನ ಸಂಬಂಧದ ಸ್ವರೂಪ ಎಂಥದ್ದು ಎಂದು ಬಿಜ್ಜಳ ಕೇಳಿದಾಗ ಹೇಳಲೂ ಕೂಡಾ ಗೊತ್ತಾಗದೆ ಇರುವಷ್ಟು ಮುಗ್ಧತೆಯಿಂದ ಕೂಡಿದ್ದು ಆಗ ಬಸವಣ್ಣ ಹೇಳುವ ಮಾತು ಸಂಬಂಧಗಳನ್ನು ಅರ್ಥೈಸುವ ಸಾಮಾಜಿಕ ಗುರುತಿಸುವಿಕೆ ಎಷ್ಟೊಂದು ದೋಷ ಪೂರ್ಣವಾಗಿರುತ್ತದೆ ಎಂಬುದನ್ನು ಮತ್ತು ಅದನ್ನು ಅರ್ಥೈಸಲು ನಿಂತವ್ಯಕ್ತಿ ತನ್ನ ಅನುಕೂಲಕ್ಕೆ, ಅರ್ಥಕ್ಕೆ ತಕ್ಕ ಹಾಗೆ ಗುರುತಿಸಿಕೊಳ್ಳುವುದರಿಂದ ಎಂಥಾ ದುರಂತವಾಗುತ್ತದೆ ಎಂಬುದನ್ನು ತುಂಬಾ ಮಾರ್ಮಿಕವಾಗಿ ಹೇಳ್ತಾನೆ. ಆ ಮಾತುಗಳೆಂದರೆ " ಪ್ರೇಮಿಸಿದ ವ್ಯಕ್ತಿಗೆ ತನ್ನ ಪ್ರೇಮದ ವಿಚಾರವೇ ಗೊತ್ತಿಲ್ಲ! ಅದಕ್ಕೆ ಹೆಸರಿಟ್ಟು ಪಾಪ ಮಾಡುವವರು ನಮ್ಮಂತಹವರು" ಎಂಬವು.

ಬಿಜ್ಜಳ ಮತ್ತು ಬಸವಣ್ಣನ ನಡುವೆ ನಡೆಯುವ ಈ ವಾಗ್ವಾದದ ವೈಖರಿಯ ಬಗ್ಗೆ ಅದರ ಸ್ವರೂಪದ ಬಗ್ಗೆ ಬಸವಣ್ಣ ಎಲ್ಲೂ ಮಾತಾಡುವುದೇ ಇಲ್ಲ. ಆದರೆ ಬಿಜ್ಜಳನೇ ಅದನ್ನು 'ಜಗಳ' ಎಂದು ಗುರುತಿಸುತ್ತಾನೆ ಮತ್ತು ಈ ಜಗಳ ಬಗೆಹರಿದ ನಂತರ ಮತ್ತೆ ತನ್ನ ಮನಸನ್ನು ಕಲಕುವಂತಹ ಶಿವಶರಣರ ವಿಚಾರಗಳನ್ನಾಗಲಿ, ತನ್ನ ವೈಯಕ್ತಿಕ ಬದುಕಿಗೆ ಅಂಟಿಕೊಂಡೇ ಇರುವ ಆಸ್ತಿ, ವೈಭವ, ಕಿರೀಟ, ವಜ್ರ, ಆನೆ, ಕುದುರೆ ಇತ್ಯಾದಿಗಳ ಲೆಕ್ಕಾಚಾರ ಹಾಕುತ್ತಾ ತಲೆನೋವು ಬರಿಸಬಾರದೆಂದು ವಿನಂತಿಸುತ್ತಾನೆ.

ಸಮಾಜದ ಅನ್ಯಾಯ ದಬ್ಬಾಳಿಕೆಗಳನ್ನು ಕಂಡು ಪ್ರತಿಭಟಿಸುವ ಬಸವಣ್ಣ ತನಗೆ ಒಂದು ಆಶ್ಚರ್ಯಕರವಾದ ಗುಮಾನಿ ಇದೆ ಎನ್ನುತ್ತಾನೆ. ಅದೆಂದರೆ ಬಡತನದಿಂದ ನರಳುವ ಕೊಚ್ಚೆಯಲ್ಲಿ ಹೊರಳುವ ಅನ್ಯಾಯಕ್ಕೆ ತುತ್ತಾದ ಜನ ರಾಜನ ವೈಭವವನ್ನು ಸಂಮೃದ್ಧಿಯನ್ನು ಕಂಡು ತಮ್ಮ ಬದುಕಿನ ಕೊರತೆಯನ್ನು ಮರೆತು ಆನಂದಿಸುವ ಗುಣವನ್ನು

ಕಂಡು ತನಗೆ ಸೋಜಿಗ ಎಂದಾಗ ಇಂಥ ವಿಚಾರಗಳು ತನ್ನ ವ್ಯವಸ್ಥೆ ಹಾಗೂ ಬಸವಣ್ಣನ ಕ್ರಾಂತಿ ಎರಡನ್ನೂ ಮೀರಿದಂಥಾದ್ದು ಎಂದು ಬಿಜ್ಜಳ ಪಲಾಯನವಾದೀ ಜಾಣತನವನ್ನು ಪ್ರದರ್ಶಿಸಿ ಜಾರಿಕೊಳ್ಳಲು ಪ್ರಯತ್ನಿಸುತ್ತಾನೆ.

ಮೊದಮೊದಲು ಕೇವಲ ಬಸವಣ್ಣನಿಗಾಗಿ ಬಸವಣ್ಣನನ್ನು ಮೆಚ್ಚಿದೆನೆನ್ನುವ ಬಿಜ್ಜಳ ಕ್ರಮೇಣ ಹೇಗೆ ತಾನು ಆತನ ಮಾತಿಗೂ ಮನಸೋತೆನೆಂದು ಹೇಳುತ್ತಲೇ; ಎಲ್ಲ ಸಂದರ್ಭದಲ್ಲೂ ಮೈತುಂಬಿಕೊಂಡ ಬಸವಣ್ಣನ ವ್ಯಕ್ತಿತ್ವದ ಗಾಂಭೀರ್ಯ ಮಾತ್ರ ತನಗೆ ಬರಲೇ ಇಲ್ಲ ಎಂಬುದನ್ನು ಬಿಜ್ಜಳ ತಾನೇ ಸ್ವತಃ ಒಪ್ಪಿಕೊಳ್ತಾನೆ. ಆದರೆ ಬಸವಣ್ಣನ ಹಾಗೆ ಕೊಂಚ ಕೂಡಾ ನಗದೆ, ಹಲ್ಲುಕಚ್ಚಿಕೊಂಡು ಇರುವುದು ತನ್ನಿಂದ ಸಾಧ್ಯವಿಲ್ಲ ಎನ್ನುತ್ತಾ ತನ್ನ ಹಲ್ಲೊಂದು ಹಿಂದಿನ ರಾತ್ರಿ ಬಿದ್ದುಹೋಗಿರುವ ವಿಷಯವನ್ನು ಬಿಜ್ಜಳ ಬಹಿರಂಗ ಪಡಿಸಿದಾಗ, ಆ ಹಲ್ಲು ರಾಜ ಕೇರಳದ ಹುಡುಗಿಯರ ಜೊತೆ ಸರಸಸಲ್ಲಾಪದಲ್ಲಿದ್ದಾಗ ಬಿದ್ದುಹೋದದ್ದೆಂಬ ಸ್ವಾರಸ್ಯಕರವಾದ ಗುಟ್ಟನ್ನು ಬಸವಣ್ಣ ರಟ್ಟು ಮಾಡುವುದರ ಮೂಲಕ ಬಸವಣ್ಣ ಬಿಜ್ಜಳನ ಖಾಸಗಿ ಜೀವನದ ಬಗೆಗೆ ತನಗಿದ್ದ ಅರಿವಿನ ವ್ಯಾಪ್ತಿಯ ಅನಾವರಣವನ್ನೂ ಮಾಡುತ್ತಾನೆ.

ಆದರೆ ಬಿಜ್ಜಳ ಇದನ್ನು ಅಶ್ಲೀಲ ಆಲೋಚನೆ ಎಂದು ನಯವಾಗಿ ತಿರಸ್ಕರಿಸಲೆತ್ನಿಸಿದರೂ ಬಸವಣ್ಣನ ಗಾಂಭೀರ್ಯ ಬಿಜ್ಜಳನನ್ನು ಮೌನವಾಗಿಸುತ್ತದೆ. ಆದರೂ ಬಸವಣ್ಣನ ಗಾಂಭೀರ್ಯದ ಬಗ್ಗೆಯೂ ಬಿಜ್ಜಳ ವ್ಯಂಗ್ಯಮಾಡಿದಾಗ ಬಸವಣ್ಣ ತನ್ನ ಗಾಂಭೀರ್ಯವನ್ನು ಸಮರ್ಥನೆ ಮಾಡಿಕೊಳ್ಳುತ್ತಾ ನಿಜವಾದ ಗಾಂಭೀರ್ಯ ನೋವಿನಲ್ಲಿ ಇದೆಯಂತಲೂ, ಮತ್ತು ತನ್ನ ನೋವು ಒಂದು ಬಗೆಯದಲ್ಲವೆಂತಲೂ ಹೇಳ್ತಾನೆ. ರಾಜನಿಗೆ ಹಲ್ಲು ಬಿದ್ದಿದೆ' ಎಂಬ ಸುದ್ದಿಯೇ ಸಾಕು ಇಡೀ ದೇಶವೇ ಆಶ್ಚರ್ಯ ಸಂಭ್ರಮದಿಂದ ಕುಣಿಯುವುದಕ್ಕೆ. ಒಂದು ಪಕ್ಷ ತಾನು ಜೋಳವನ್ನು ಮುತ್ತಾಗಿಸಿದನೆಂಬ ಸುದ್ದಿ ಸಾಕು ಜನ ಅರಮನೆಯೆದುರು ಸಂಭ್ರಮದಿಂದ ನೆರೆಯುತ್ತದೆ. ಇಂತಹ ಸಂಗತಿಗಳು ತನ್ನನ್ನು ಧೈರ್ಯಗೇಡಿಯನ್ನಾಗಿಸಿ ತಾನು ವಿಧಿಯಿಲ್ಲದೆ ಸಂಗಮನ ಮೊರೆ ಹೋಗುವಂತೆ ಮಾಡುತ್ತದೆ. ಈ ಜನರ ಗೋಡೆಗೆ ತಲೆ ಚಚ್ಚಿಕೊಳ್ಳುವಂತಾಗುತ್ತದೆ; ಎನ್ನುವ ಬಸವಣ್ಣನ ಮಾತುಗಳಲ್ಲಿ_ ವಸ್ತುಸ್ಥಿತಿಯಿಂದ ದೂರಾದ ಪವಾಡ, ಹಾಗೂ ಎಂದಿಗೂ ಪವಾಡವಾಗಲಾರದ ವಸ್ತುಸ್ಥಿತಿ ಇವೆರಡರ ನಡುವಿನ ವೈರುಧ್ಯಗಳು ಹೇಗೆ ಗೊಂದಲಕಾರಿಯಾದವುಗಳು ಎಂಬುದನ್ನು ಬಸವಣ್ಣ ಕೂಡಾ ಸಾಬೀತು ಪಡಿಸಲಾಗದೆ ತೊಳಲಾಡುವ ತಾತ್ವಿಕ ಗೋಜಲುಸ್ಥಿತಿ ನಮಗೆ ಗೋಚರವಾಗುತ್ತದೆ.

ಬಿಜ್ಜಳ ತಾನು ಅತ್ಯಂತ ವಾಸ್ತವವಾದೀ ಧೋರಣೆಯುಳ್ಳವನು ಎಂಬುದನ್ನು ಸಾಬೀತು ಪಡಿಸಲು ಮಂದಸ್ಮಿತನಾಗಿದ್ದ ಬಸವಣ್ಣನ ಮುಖವನ್ನು 'ಚಂದ್ರನಂತಿದೆ' ಎಂದು ಹೋಲಿಸಿ ಕೊನೆಗೆ ತನ್ನ ಹೋಲಿಕೆಯ ಬಗ್ಗೆ ತಾನೇ ಮುಗುಳ್ನಕ್ಕು ಹೋಲಿಕೆಯಲ್ಲಿನ ಅನೌಚಿತ್ಯದ ಬಗ್ಗೆ, ಮುಖವನ್ನು ಚಂದ್ರನಿಗೆ ಹೋಲಿಸುವ ಇಂಥ ಉಪಮೆಗಳು ಅತ್ಯಂತ ಅವಾಸ್ತವಿಕ, ಅಸಂಬದ್ಧ ಹಾಗೂ ಸಾದೃಶ್ಯರಹಿತವೆಂದು ಛೀಗುಡುತ್ತಾ, ಮುಖ ನಿಜಕ್ಕೂ

ಚಂದ್ರನ ಹಾಗೆ ಗುಂಡಗಿದ್ದರೆ, ಸೀಳಿದ್ದರೆ, ಬಾಗಿದ್ದರೆ ಎಷ್ಟು ಅಸಹ್ಯವಾಗ್ತಾ ಇತ್ತು. ಅದಕ್ಕೆ ನನಗೆ ಕಾವ್ಯದ ವರ್ಣನೆ ಅಂದ್ರೆ ಬೇಸರ ತರುತ್ತೆ ಎನ್ನುವುದರ ಮೂಲಕ ತಾನು ಮೆಟೀರಿಯಲಿಸ್ಟಿಕ್ ಧೋರಣೆಯುಳ್ಳವನೆಂಬುದನ್ನು ಸಾಬೀತು ಪಡಿಸಲು ಹೆಣಗುವ ಬಿಜ್ಜಳನ ವಾದವನ್ನು ತಿರಸ್ಕರಿಸುವ ಬಸವಣ್ಣ ' ಕಾವ್ಯ ಬದುಕಿಗೆ ತಂಪು ಕೊಡುತ್ತೆ' ಎಂದಾಗ ಬಿಜ್ಜಳ ಅದರ ಬಗ್ಗೆಯೂ ವ್ಯಂಗ್ಯವಾಡಿ ಗೇಲಿ ಮಾಡ್ತಾನೆ, " ಕೆಲವರಿಗೆ ಕಂಪು ಕಾವ್ಯದಿಂದ ಬರುತ್ತೆ, ಮತ್ತೆ ಕೆಲವರಿಗೆ ಕನ್ಯೆಯರಿಂದ ಬರುತ್ತೆ, ಕನ್ಯಯರಿಗೆ ಅಭಾವ ಬಂದಾಗ ಕಾವ್ಯಕ್ಕೆ ಧರ್ಮಕ್ಕೆ ಹೋಗ್ತೇವೆ'' ಎನ್ನುವ ಬಿಜ್ಜಳ ತನ್ನ ಬದುಕಿನ ಕಂಪು ಕಾವ್ಯಕೇಂದ್ರಿತವಾದುದಲ್ಲ ಎಂಬುದನ್ನು ಸೂಚ್ಯವಾಗಿ ಸೂಚಿಸುತ್ತಾನೆ.

ಬಸವಣ್ಣ ಹಿಂದೆ ಪ್ರಸ್ತಾಪಿಸಿದ್ದನೆನ್ನಲಾದ 'ಗಂಧವತೀ ಪೃಥಿವಿ'ಯನ್ನು ಉಲ್ಲೇಖಮಾಡುವ ಬಿಜ್ಜಳ, ಬಸವಣ್ಣ ಕೇವಲ ಸುಖದ ಮಾತಾಡಲು ಮಾತ್ರ ಲಾಯಕ್ಕೆಂದೂ, ಆದರೆ ತಾನು ಆ ಮಾತಿನ ಹಿಂದೆ ಇರುವ ಕಂಪನ್ನೂ ಗುರುತಿಸಬಲ್ಲ ರಸಿಕನೆಂದೂ ತನ್ನ ರಸಿಕತೆಯನ್ನೂ ಪ್ರಶಂಸೆ ಮಾಡಿಕೊಳ್ಳುತ್ತಾನೆ. ಬಡವರ ಚಿಂದಿ ಬಟ್ಟೆಗಳ ಮೇಲೆ ಕಣ್ಣುನೆಟ್ಟ ಬಸವಣ್ಣನಿಗೆ ಅವರ 'ಗಂಧವತೀ ಪೃಥಿವೀ' ಯ ಇರವನ್ನು ತಿಳಿಯುವುದಾದರೂ ಹೇಗೆಂದು ಬಸವಣ್ಣನ ಅರಸಿಕತೆಯ ಬಗ್ಗೆ ಅನುಕಂಪತೋರಿ ಗೇಲಿ ಮಾಡುತ್ತಾನೆ. ಬಸವಣ್ಣನ ಮಾತಿನಲ್ಲೇ ಬಸವಣ್ಣನನ್ನು ಸಿಲುಕಿಸುವಷ್ಟು ಜಾಣ್ಮೆಯುಳ್ಳ ಬಿಜ್ಜಳ ಭೂಮಿಯ ವಾಸನೈ ನೋಡಿ ಎಷ್ಟು ದಿನವಾಯಿತೆಂದು, ವೈದಿಕ ಬ್ರಾಹ್ಮಣರ ನಿಜವಾದ ಇಂಗಿತವನ್ನು ಅರ್ಥಮಾಡಿಕೊಂಡ ಬಿಜ್ಜಳ ನಿಮಗೆ ಬೇಕಾದ ರುದ್ರನ ತಲೆದಂಡದ ಬಗ್ಗೆ ಏನೂ ಯೋಚನೆ ಮಾಡಬಾರದೆಂದೂ ಅದನ್ನು ನನಗೆ ಬಿಡಿರೆಂದು ಭರವಸೆ ಕೊಡುವ ಬಿಜ್ಜಳ, ಈ ವಿಷಯಕ್ಕೆ ದೊಡ್ಡ ತಡೆಯಾದ ಶರಣಸೈನ್ಯದ ಬಗ್ಗೆ ಗಂಭೀರವಾಗಿ ಯೋಚನೆ ಮಾಡುತ್ತಾ ಈ ವಿಷಯವನ್ನು ಸಂಕ್ರಾಂತಿಯ ಬಲಿಯೊಂದಿಗೆ ಸಂಬಂಧ ಕಲ್ಪಿಸಿ ಬಿಡುತ್ತಾನೆ.

ರುದ್ರನ ತಲೆದಂಡಕ್ಕೆ ಸಂಬಂಧಿಸಿದಂತೆ ಬಿಜ್ಜಳ ಮತ್ತೆ ಬಸವಣ್ಣನನ್ನು ವಾಗ್ವಾದಕ್ಕೆಳೆಯುತ್ತಾ , "ನಿಮ್ಮ ರಾಜ್ಯದಲ್ಲಿ ಹಾಡುಹಗಲಿನಲ್ಲೇ ಕನ್ಯೆಯರ ಮೇಲೆ ಹೊಲೆಯರಿಂದ ಅತ್ಯಾಚಾರ್ರ ನಡೀತಿದೆ, ಎಂದು ಆರೋಪಿಸುತ್ತಾನೆ. ಆಗ ಬಸವಣ್ಣ ಮೊದಲಿಗೆ ಇದು ನನ್ನ ರಾಜ್ಯವಲ್ಲ, ತಮ್ಮ ರಾಜ್ಯವೆಂದೂ ಆತ ಹೊಲೆಯನಲ್ಲ ಶಿವಭಕ್ತನೆಂದೂ, ಅದು ಅತ್ಯಾಚಾರವಲ್ಲ; ಪ್ರೇಮಪ್ರಕರಣವೆಂದೂ ಬಿಜ್ಜಳನ ಆರೋಪವನ್ನು ಸಂಪೂರ್ಣವಾಗಿ ಹುರುಳಿಲ್ಲದ್ದೆಂದು ಅಲ್ಲಗಳೆದು ಬಿಡುತ್ತಾನೆ. ಮತ್ತು ಬಸವಣ್ಣ ಸೂಚಿಸಿದಂತಹ ಇಂತಹ ಪ್ರೇಮ ಪ್ರಕರಣಕ್ಕಾಗಿಯೇ ಕೇವಲ ಒಂದು ತಿಂಗಳ ಹಿಂದೆಯಷ್ಟೇ ಬ್ರಾಹ್ಮಣನೊಬ್ಬನಿಗೆ ತಾನು ತಲೆದಂಡ ವಿಧಿಸಿದೆನೆಂಬುದನ್ನು ಜ್ಞಾಪಿಸುತ್ತಾನೆ. ಅವನು ತಪ್ಪಿತಸ್ಥನಲ್ಲವೆಂದು ತಿಳಿದಿದ್ದಾಗ ಕೂಡಾ ಪ್ರಜೆಗಳ ನೆಮ್ಮದಿಗಾಗಿ ತಲೆದಂಡ ವಿಧಿಸಿದೆನೆನ್ನುವ ಸಮರ್ಥನೆಯನ್ನು ಹೇಸಿಗೆಯಿಲ್ಲದೆ ಮುಂದಿಡುವ ಬಿಜ್ಜಳ, ತನ್ನ ಅಧಿಕಾರದ ಉಳಿವಿಗಾಗಿ ಅಮಾಯಕರನ್ನೂ ಕೂಡಾ ಬಲಿ ತೆಗೆದುಕೊಳ್ಳಲು ಹೇಸದವನೆಂಬುದನ್ನು ಹೇಳಿಕೊಳ್ಳಬಲ್ಲ ಭಂಡತನ ತನಗಿದೆ ಎಂಬುದನ್ನು ಸಾಬೀತು ಪಡಿಸುತ್ತಾನೆ.

ರುದ್ರ ಉಷಾಳ ಪ್ರಕರಣಕ್ಕೆ ಸಂಬಂಧಿಸಿದಂತೆ ಬಸವಣ್ಣ 'ಪ್ರೇಮಪ್ರಕರಣ' ಎಂದು ಕರೆದದ್ದನ್ನು ಈ ಹಿಂದೆ 'ಅತ್ಯಾಚಾರ'ಎಂದು ಕರೆದಿದ್ದ ಅದೇ ಬಿಜ್ಜಳ ಅವು ಪ್ರೇಮಪ್ರಕರಣಗಳಲ್ಲ , ಜಾತಿಜಾತಿಗಳ ಮೇಲಿನ ದಬ್ಬಾಳಿಕೆ, ಅವರು ಪ್ರೇಮಿಸುವುದು ಮನುಷ್ಯರನ್ನಲ್ಲ, ಅತ್ಯಾಚಾರ ಕೂಡಾ ಮನುಷ್ಯನನ್ನು ಉದ್ದೇಶಿಸಿರದ ಜಾತಿಗಳ ಮೇಲೇ ಕೇಂದ್ರೀಕೃತವಾಗಿರುತ್ತವೆ. ಇಂಥ ಮಾತುಗಳು ತನ್ನ ಅರ್ಥಕ್ಕೆ ಸಿಗದೆ ಇರುವಂಥಾದ್ದು. ತಪ್ಪು ಮಾಡಿದವರು ಮಾತ್ರ ಅಲ್ಲ, ತಪ್ಪು ಇಲ್ಲದೆ ಇದ್ದಾಗ ಕೂಡಾ ಹತ್ತಿಕ್ಕಬೇಕಾದದ್ದು ನನ್ನ ಕೆಲಸ, ತಪ್ಪು ಇಲ್ಲದೆ ಇದ್ದಾಗ ಕೂಡಾ ಜನರನ್ನು ಹತ್ತಿಕ್ಕುತ್ತಲೇ ಇರಬೇಕೆಂಬ ಬಿಜ್ಜಳನ ದುಷ್ಟಬುದ್ಧಿಯ ರಾಜಕೀಯ ಕುತಂತ್ರ ವ್ಯಕ್ತವಾಗುತ್ತದೆ. ಜನರನ್ನು ಹತೋಟಿಯ ಲ್ಲಿಟ್ಟುಕೊಳ್ಳಲು ಜನ ತಪ್ಪು ಮಾಡದೆ ಇದ್ದಾಗಲು ಕೂಡಾ ಅವರ ತಪ್ಪನ್ನು ಹುಡುಕಿಕೊಂಡು ಹೋಗುವುದು ರಾಜನ ಕರ್ತವ್ಯ ಎಂದು ಬಿಜ್ಜಳ ಎಂದಾಗ, ಬಸವಣ್ಣ ರಾಜನ ಈ ರೀತಿಯ ಬೇಟೆ ಬೇರೆ ಬೇರೆ ರೀತಿಯಲ್ಲಿ ನಡೆದೇ ಇರುತ್ತದೆ ಎಂದು ಸೂಚ್ಯವಾಗಿ ತಿವಿಯುತ್ತಾನೆ. ಬಿಜ್ಜಳನ ಆಸ್ಥಾನದಲ್ಲಿ ತನಗಿರುವ ಅಧಿಕಾರ ಯಾವಾಗ ಬೇಕಾದರೂ ತ್ಯಜಿಸಲು ಸಿದ್ಧನಿರುವ ಬಸವಣ್ಣನಿಗೆ ಬಿಜ್ಜಳನ ಮರ್ಜಿಯಲ್ಲಿ ಸಲಾಮು ಹೊಡೆಯುತ್ತಾ, ಅವನ ತಾಳಕ್ಕೆ ಕುಣಿಯುವ ಅವಶ್ಯಕತೆ ಇಲ್ಲವೆಂಬುದನ್ನು ಬಲ್ಲ ಬಸವಣ್ಣ ಮುಂದೆ ಬಿಜ್ಜಳನ ಕಾರ್ಯವಿಮುಖತೆಯನ್ನು ಟೀಕಿಸುತ್ತಾನೆ.

ಅರಮನೆಯ ಪಲ್ಲಂಗದ ಮೇಲೆ ಒರಗಿ ಸುಂದರ್ರ ಕಂಠಗಳ ಧ್ವನಿ ಕೇಳುವವರಿಗೆ ಬೀದಿಯ ಗೋಳು ತಟ್ಟುವುದೇ ಕಷ್ಟ. ಬಿಜ್ಜಳನ ಕಿರೀಟದ ಒಂದು ವಜ್ರ ದೇಶದ ಅರ್ಧ ಹೊಟ್ಟೆಗೆ ಅನ್ನ ಕೊಡಬಲ್ಲದು, ಚೆನ್ನಕೇಶವನ ಮುತ್ತಿನ ಹಾರ ಅನೇಕರ ಕಂಬನಿ ಒರೆಸಬಲ್ಲದು, ಈ ರಾಜ್ಯದ ಪ್ರತಿಯೊಂದು ವಿಗ್ರಹವೂ ಬಡಜನರ ಮೂಕವೇದನೆಯ ಘನರೂಪವಾಗಿದೆ. ವೈದಿಕರ ಮಂತ್ರ ಅರಮನೆಯ ಗೋಡೆಗಳ ಒಳಗೆ ಸುತ್ತಿ ಸತ್ತುಹೋಗಿದೆ," ಎನ್ನುವ ಬಸವಣ್ಣ ಬಡಜನರ, ಶ್ರಮ ಬೆವರು ಬಲಿದಾನಗಳ ಮೇಲೆ ನಿಂತಿರುವ ರಾಜನ ಈ ಭವ್ಯವೈಭವ ಎಷ್ಟು ಅಮಾನವೀಯವಾದುದು ಎಂಬುದನ್ನು ಬಹಳ ವಿಷಾದದೊಂದಿಗೆ ನಿರ್ದಾಕ್ಷಿಣ್ಯವಾಗಿ ಬಿಜ್ಜಳನ ಅರಿವಿಗೆ ತರುತ್ತಾನೆ. ರಾಜನ ಎಲ್ಲ ಕನಸು ಈ ಗೋಳಿನ ಮಧ್ಯೆ ಆರಂಭವಾಗಬೇಕೆನ್ನುತ್ತಾನೆ ಬಸವಣ್ಣ. ಆದರೆ ಬಿಜ್ಜಳ ಯಥಾಸ್ಥಿತಿಯನ್ನು ಕಾಪಾಡಿಕೊಂಡು ಹೋಗುವುದರಲ್ಲಿ ಆಸಕ್ತಿಯುಳ್ಳವನು.

ರಾಜನ ವೈಭವವನ್ನು ಕಂಡು ಹೊಟ್ಟೆಗಿಲ್ಲದ ಜನ ಅವನ ವಿರುದ್ಧದಂಗೆಯೇಳುವ, ಅಥವಾ ಅವನ ವೈಭವದೊಡನೆ ತಮ್ಮ ಜೀವನದ ಕೊರತೆಯನ್ನು ಹೋಲಿಸಿಕೊಳ್ಳಲೂ ತಿಳಿಯದ ಮೌಢ್ಯದಲ್ಲೇ ಮುಳುಗಿರುವ ಮುಗ್ಧಅಮಾಯಕ ಜನರು ರಾಜನ ವ್ಯವಸ್ಥೆಯ ಬಗ್ಗೆ ಚಕಾರ ಕೂಡಾ ಎತ್ತಲಾಗದಂತೆ ಬಿಜ್ಜಳ ತನ್ನ ಭಟ್ಟಂಗಿಯಿಂದ ಕಥೆ ಹೇಳಿಸುತ್ತಾನೆ. ಆದರೆ ಈ ಎಲ್ಲದರ ಹಿಂದಿನ ಮೌಢ್ಯ ಬಸವಣ್ಣನವರಿಗೆ ದುರಂತವಾಗಿ ಕಾಣುತ್ತದೆ. ಕೊಚ್ಚೆಯಲ್ಲಿ ಬಿದ್ದ ವ್ಯಕ್ತಿ ರಾಜನತ್ತ ನೋಡಿ ಕೈಜೋಡಿಸುವುದನ್ನು ಕಂಡು ಬಸವಣ್ಣ ಆಶ್ಚರ್ಯಚಕಿತನಾಗಿದ್ದಾನೆ. ಸದಾ ಶರಣರನ್ನು ಬಗ್ಗುಬಡಿಯುವ ಕಾರ್ಯದಲ್ಲಿ

ಕ್ರಿಯಾಶೀಲವಾಗಿರುವ ಬಿಜ್ಜಳ ಪ್ರಜೆಗಳ ಜೀವನವನ್ನು ವೈಚಾರಿಕವಾಗಿ, ಸಾಮಾಜಿಕವಾಗಿ ಮೇಲೆತ್ತುವ ಕಡೆ ಇಲ್ಲ. ಆ ವಿಷಯದಲ್ಲಿ ಅವನದು ನಿರ್ಲಕ್ಷಿತವಾದ ಧೋರಣೆ. ಅದಕ್ಕೇ ಅವನ ಕಣ್ಣಿಗೆ ಬರೆ ಶರಣರೇ ಕಾಣಿಸುತ್ತಾರೆ. ಯಾಕೆಂದರೆ ಅವರು ಎಚ್ಚೆತ್ತವರು, ಅವರನ್ನು ಮಟ್ಟ ಹಾಕಿದರೆ ತನ್ನ ದಾರಿ ನಿರಾತಂಕ ಎಂದು ಬಿಜ್ಜಳ ಭಾವಿಸಿದ್ದಾನೆ. ಆದರೂ ಈ ದೇಶದಲ್ಲಿ ಇನ್ನೂ ಅರ್ಧದಷ್ಟು ಜನ ಎಚ್ಚೆತ್ತೇ ಇಲ್ಲ ಎಂಬುದೆ ಬಿಜ್ಜಳನಂಥ ರಾಜನ ಐಶಾರಾಮಿತನಕ್ಕೆ, ನಿರಂಕುಶ ಪ್ರಭುತ್ವಕ್ಕೆ ನಾಂದಿಯಾಗಿದೆಯೆಂದು ಬಸವಣ್ಣ ವಿಷಾದಿಸುತ್ತಾನೆ.

ರಾಜನ ಪಟ್ಟದ ಕುದುರೆಯ ಬೆಲೆ ಕಿರೀಟದ ಪಚ್ಚೆಯ ಬೆಲೆ ಕಟ್ಟಿ ತಿಳಿದು ಸಂತೋಷಿಸುವ ಜನ ಬಿಜ್ಜಳನನ್ನು ಸಾಕ್ಷಾತ್ ದೇವೇಂದ್ರ ಎಂದೇ ಭಾವಿಸಿದ್ದಾರೆ. ದೂರದ ನಕ್ಷತ್ರಗಳ ಗುಟ್ಟು ಕಂಡು ಹಿಡಿದ ಜ್ಞಾನಿಗಳಂತೆ ಹೆಮ್ಮೆಯಿಂದ ಅವರು ರಾಜನ ವೈಭವದ ಬಗ್ಗೆ ಬೀಗುವ ಜನ, ರಾಜನ ಕುದುರೆಗಳ ಚುಕ್ಕೆ ಚಿತ್ತಾರಗಳ ಲೆಕ್ಕ ಇಟ್ಟು ಹರ್ಷಿಸುವ ಜನ, ಅತಃಪುರದ ಹೆಂಗಸರ ಮೂಗುತಿಗಳ ಸೌಂದರ್ಯ ಕಂಡು ಆನಂದ ಪಡುವ ಜನ, ಚಳಿಗಾಲದಲ್ಲಿ ಅಂಗೈ ಅಗಲ ಬಟ್ಟೆಯಿಲ್ದೆ ನಡುಗುವ ತಮ್ಮ ಕಂದಮ್ಮಗಳ ಬಗ್ಗೆ ಕಾಳಜಿಯಿಲ್ಲದೆ ಸನಾತನಿಗಳ ಮಂತ್ರಗಳಿಗೆ ಮುಗ್ಧತೆಯಿಂದ ಕಿವುಡಾಗುವ ಹೊಟ್ಟೆಗಿಲ್ಲದ ಜನರ ದುರಂತ ಜೀವನಕ್ಕೆ ಬಸವಣ್ಣನಿಗೆ ದಿಗ್ಭ್ರಮೆ ಆಶ್ಚರ್ಯ ದುಃಖ ಒಟ್ಟೊಟ್ಟಿಗೇ ಆಗಿದೆ ಎಂಬುದನ್ನು ಬಿಜ್ಜಳನಿಗೆ ತಿಳಿಸುವ ಬಸವಣ್ಣ ಇಂಥಾ ಜನರ ಮಧ್ಯದಿಂದ ಬಿಜ್ಜಳನ ಕನಸು ಮೈಪಡೆಯಬೇಕಾಗಿತ್ತೆಂದು ಆದರೆ ಅವನ ಕನಸೇ ಬೇರೆ. ತನ್ನ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತುವವರನ್ನು ದಮನ ಮಾಡುವ ಮೂಲಕ ತನ್ನ ಅಧಿಕಾರ ಸ್ಥಾನವನ್ನು ಭದ್ರಪಡಿಸಿಕೊಳ್ಳಲೆಳಸುವ ಪಟ್ಟಭದ್ರ ಹಿತಾಸಕ್ತಿ ಯಿಂದ ಪ್ರೇರಿತವಾದದ್ದು.

ಇಂಥ ವ್ಯವಸ್ಥೆಯಲ್ಲಿ ಮಂತ್ರಿಯಾಗಿ ಮುಂದುವರೆದು ಅಲ್ಲಿನ ಆಗು-ಹೋಗುಗಳಲ್ಲಿ ತಾನೂ ಪಾಲು ಪಡೆಯಲು ಸಿದ್ಧನಿಲ್ಲದ ಬಸವಣ್ಣ ಬಿಜ್ಜಳನ ವ್ಯವಸ್ಥೆಯಲ್ಲಿ ಮುಂದುವರೆಯಲಾರೆನೆಂದೂ, ತನ್ನ ಜನಗಳಿಗೆ ಕಿಂಚಿತ್ತಾದರೂ ಒಳಿತಾಗುವುದಾದರೆ ನಾನು ಈ ಎಲ್ಲದರಿಂದ ಬಿಡುಗಡೆ ಪಡೆಯಬಲ್ಲೆನೆಂದು ತುದಿಗಾಲಲ್ಲಿ ತನ್ನ ಅಧಿಕಾರವನ್ನು ಧಿಕ್ಕರಿಸಲು ಮುಂದಾಗುತ್ತಾನೆ. ಆದರೆ ಬಿಜ್ಜಳ ವೈದಿಕ ಜನಿವಾರವನ್ನು ಕಿತ್ತು ಹೊರಬಂದ ಬಸವಣ್ಣನಿಗೆ ಅಧಿಕಾರದಿಂದ ಬಿಡುಗಡೆ ಪಡೆಯುವುದೇನೂ ಕಷ್ಟವಾಗಲಾರದು. ಅದು ಬಹುಸುಲಭದ ಕೆಲಸ. ಆದರೆ ರಾಜನಾಗಿ ಅಧಿಕಾರಕ್ಕೆ ಅಂಟಿದ ತನ್ನ ಬಂಧನ ಇಡೀ ರಾಜ್ಯಕ್ಕೆ ಸಂಬಂಧಿಸಿದ್ದು, ಸುಲಭವಾಗಿ ಬಿಡಿಸಿಕೊಂಡು ಹೊರಲಾರದ ಒಂದು ಬದ್ಧತೆ, ಅದಕ್ಕೆ ತಾನು ಅಂಟಿಕೊಂಡೇ ಇರಬೇಕಾದ ಅನಿವಾರ್ಯತೆ ಅವನಿಗೆ ಬಸವಣ್ಣನಿಗಿಂತ ಹೆಚ್ಚಾಗಿದೆಯೆಂದು ಅದನ್ನು ನಿರ್ವಹಿಸಲಾರದೆ ಸೋತರೆ, ಅಸಮರ್ಥನೆಂಬ ಅಪಖ್ಯಾತಿಗೆ ಒಳಗಾಗಬೇಕಾಗುತ್ತದೆಯೆಂದೂ, ಅದಕ್ಕೆ ತನ್ನ ಪ್ರಭುತ್ವದಲ್ಲಿ ಮಾತ್ರ ನಂಬಿಕೆ ಇರುವ ತಾನು ಅದನ್ನು ಉಳಿಸಿಕೊಂಡು ಹೋಗಬೇಕಾದರೆ ತಾನು ತಿಂಗಳಿಗೊಂದು ಬಲಿ ಕೊಡಲೇಬೇಕಾದ ಅನಿವಾರ್ಯತೆಯನ್ನು ಬಸವಣ್ಣನ ಮುಂದಿಟ್ಟು ಬಹಳ ಚೆನ್ನಾಗಿ ಬಿಜ್ಜಳ ಚಾಣಾಕ್ಷತನದಿಂದ ವಾದಿಸುತ್ತ ಪವರ್ ಪಾಲಿಟಿಕ್ಸ್ ನ ಒಳಗುಟ್ಟನ್ನು ರಟ್ಟುಮಾಡ್ತಾನೆ.

ಬಸವಣ್ಣನ ಅನುಯಾಯಿಗಳಿಂದಲೇ ಶಿವಶರಣರೆಂದು ಹೇಳಿಕೊಳ್ಳುವ ಹೊಲೆಯರಿಂದಲೇ ಈಗ ಅತ್ಯಾಚಾರ, ಕೊಲೆ, ಸುಲಿಗೆ ನಡೆಯುತ್ತಿರುವುದೆಂಬ ಆರೋಪದ ಬಗ್ಗೆ ಬಿಜ್ಜಳ ಸ್ಪಷ್ಟೀಕರಣವನ್ನು ಬಯಸಿದಾಗ ಬಸವಣ್ಣ ಮೌನ ವಹಿಸುತ್ತಾನೆ. ಶರಣತ್ವ ಮುರಿದ ಗಳಿಗೆಯಲ್ಲಿ ಈ ರಾಜ್ಯದ ಗತಿಯೇನೆಂದು ಕೇಳಿದಾಗಲೂ ಬಸವಣ್ಣನ ಮೌನ ಉತ್ತರವಾಗುತ್ತದೆಯೇ ಹೊರತು ಯಾವುದೇ ರೀತಿಯ ಪ್ರತಿಕ್ರಿಯೆ ವ್ಯಕ್ತವಾಗುವುದಿಲ್ಲ.

ಧರ್ಮ, ಸಿದ್ಧಾಂತ, ಜಾತಿಮತ ಭೇದಗಳ, ಭ್ರಷ್ಟರಾಜಕೀಯದ ಸೋಂಕಿಲ್ಲದೆ ಪ್ರೇಮ ಸೂರ್ಯ- ಭೂಮಿಯ ಸಂಬಂಧದ ಹಾಗೆ ನಿಸರ್ಗ ಸಹಜವಾಗಿರಬೇಕೆಂಬ ಅಪೇಕ್ಷೆ ನಾಟಕದಲ್ಲಿ ಅಂತರ್ಗತವಾಗಿದೆ. ಬ್ರಾಹ್ಮಣ ಕನ್ಯೆ ಉಷ ಬಯಸಿದ್ದು ಮಡಿವಂತನಾದ ಶಿವಶರಣನಾದ, ರುದ್ರನನ್ನಲ್ಲ. ಅವಳು ಒರಟಾದ ಹೊಲೆಯನಾದ ಮೂಲರುದ್ರನನ್ನು ಬಯಸಿದ್ದು. ಅದಕ್ಕೆ ಅವಳು ರುದ್ರನನ್ನು ಕಳೆದುಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾಳೆ.

ಇತಿಹಾಸದುದ್ದಕ್ಕು, ಅಮಾಯಕರೂ, ಮುಗ್ಧರೂ ಆದಂತಹ ಎಳೆವಯಸ್ಸಿನ ಹರೆಯದವರ ಪ್ರೀತಿ, ಸಂಪ್ರದಾಯ ಜಡರಾದ ಹಿರಿಯರ, ಧರ್ಮದ, ರಾಜಕೀಯದ ವಿಷ ವರ್ತುಲಗಳಿಗೆ ಸಿಕ್ಕಿ ಸಂಕ್ರಾಂತಿಯ 'ಬಲಿ' ಪಶುಗಳಾಗಿ ಹೋದ ದುರಂತದ ನೆನಪನ್ನು ನಾಟಕ ಧ್ವನಿಸುತ್ತದೆ. ಇಂತಹ ವ್ಯವಸ್ಥೆ ಮುಂದುವರೆಯಲು ಇಲ್ಲಿ ನಿರಂತರವಾಗಿ ರುದ್ರನಂಥವರ ತಲೆ ದಂಡಗಳು ನಡೆಯುತ್ತಲೇ ಇರುತ್ತವೆ. ಎಂಬ ವಿಷಾದದ ಅಲೆ ಕೂಡಾ ಏಳುತ್ತದೆ. ಒಟ್ಟಿನಲ್ಲಿ ಸಂಕ್ರಾಂತಿ ನಾಟಕದ ಉಳಿದೆಲ್ಲಾ ಘಟಾನಾವಳಿಗಳಿಗಿಂತ ಬಹಳ ಸ್ವಾರಸ್ಯಕರವಾದ ಪ್ರಸಂಗವೆಂದರೆ ಬಿಜ್ಜಳ - ಬಸವರ ನಡುವಿನ ಈ ತಾತ್ವಿಕ ಸಂವಾದ ಅಥವಾ ಸಂಘರ್ಷ. ನಾಟಕದ ಆಶಯವನ್ನು ಹಲವು ಆಯಾಮಗಳಿಂದ ಅರ್ಥೈಸಿಕೊಳ್ಳಲು ನೆರವಿಗೊದಗುವ ಸರ್ಚ್‌ಲೈಟಿನಂತೆ ಸಹಕಾರಿಯಾದುದಾಗಿದೆ.

# ಕನ್ನಡದಲ್ಲಿ ವಿಜ್ಞಾನದ ಬರೆಹ ಬೋಧನೆ ಕಲಿಕೆ: ಜನಾಂಗ ಪ್ರಜ್ಞೆಯಾಗಬೇಕು

ಡಾ. ನಾಗರಾಜ್‌ನೀರಗುಂದ

ಮಾತೃಭಾಷೆ ಯಲ್ಲಿ ಬೋಧನೆ, ಬರೆಹ, ಕಲಿಕೆಗಳು ಆಗಬೇಕು ಎಂಬುದು ಜಗತ್ತಿನ ಬುದ್ಧಿವಂತರ ಅಭಿಪ್ರಾಯ. ಕನ್ನಡದಲ್ಲಿ ಈ ಜಾಗೃತಿಯು ಸುಮಾರು ಮೂರುನಾಲ್ಕು ದಶಕಗಳ ಹಿಂದೆ ಮೂಡಿತು. ವಿಜ್ಞಾನ ಮಾತ್ರವಲ್ಲ , ಎಲ್ಲ ವಿಷಯಗಳನ್ನು ಕನ್ನಡದಲ್ಲಿ ಬೋಧಿಸಬೇಕು ಎಂಬ ವಿವೇಕದ ಮಾತುಗಳನ್ನು ಆಗಾಗ ಅಲ್ಲಲ್ಲಿ ಕೇಳುತ್ತಿದ್ದೇವೆ. ಈ ಅಭಿಪ್ರಾಯದ ಪರ ವಿರೋಧದ ಮಾತುಗಳನ್ನು ನಾನು ಹಲವು ವರ್ಷಗಳಿಂದ ಕೇಳುತ್ತಾ ಬಂದಿದ್ದೇನೆ, ಪದವಿ ಪೂರ್ವ ಮತ್ತು ಪದವಿ ತರಗತಿಗಳಲ್ಲಿ ಸಾಹಿತ್ಯದ ಜತೆಗೆ ವಿಜ್ಞಾನದ ವಿಷಯಗಳನ್ನು ಬೋಧಿಸುತ್ತಾ ಲೇಖನಗಳನ್ನು ರಚಿಸಿದ್ದೇನೆ. ಈ ಹಿನ್ನೆಲೆಯಲ್ಲಿ ನಾನು ಗಳಿಸಿದ ಅನುಭವ, ಎದುರಾದ ಸಮಸ್ಯೆಗಳಿಗೆ ಕಂಡುಕೊಂಡ ಪರಿಹಾರಗಳನ್ನು ಓದುಗರ ಅವಗಾಹನೆಗೆ ಈ ಲೇಖನದ ಮುಖಾಂತರ ತರುತ್ತಿದ್ದೇನೆ.

ಕನ್ನಡನಾಡಿನ ವಿಶ್ವವಿದ್ಯಾನಿಲಯಗಳು, ಪದವಿಪೂರ್ವ ಮತ್ತು ಸೆಕೆಂಡರಿ ಮತ್ತು ಹೈಯರ್‌ಸೆಕೆಂಡರಿ ಶಿಕ್ಷಣ ಇಲಾಖೆಗಳು ಮೊದಲಾದವು ಜಾಗೃತಗೊಂಡು ಮಾತೃಭಾಷೆಯಲ್ಲಿ ಬೋಧಿಸುವ ವ್ಯವಸ್ಥೆಗಳನ್ನು ಮಾಡಿವೆ. ಕನ್ನಡ ಸಾಹಿತ್ಯ ಪರಿಷತ್ತು ಮುಂತಾದವೂ ಸಹ ತಮ್ಮ ಸಹಕಾರವನ್ನು ನೀಡುತ್ತಿವೆ. ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ನೀಡಲು ಜರೂರಾಗಿರುವುದು ಪಠ್ಯಪುಸ್ತಕಗಳು ಮತ್ತು ಪರಾಮರ್ಶನಾ ಕೃತಿಗಳು ಹಾಗೂ ಸಂಶೋಧಾನಾ ಲೇಖನಗಳ ರಚನೆ. ವಿಜ್ಞಾನದ ವಿಷಯಕ್ಕೂ ಸಹ ಇದು ಅನ್ವಯವಾಗುತ್ತದೆ. ಬೋಧನೆ ಮತ್ತು ಅಭ್ಯಾಸಮಾಡಲು ಕನ್ನಡದಲ್ಲಿ ವಿಜ್ಞಾನದ ಪುಸ್ತಕಗಳೆಲ್ಲಿವೆ? ಬರೆಯಲು ಸಾಧ್ಯವೇ ಇಲ್ಲ ಎಂದು ಅಡ್ಡಮಾತು ಆಡುತ್ತಿದ್ದವರ ಸಂಖ್ಯೆಯು ಮೂರುದಶಕಗಳ ಹಿಂದೆ ಬಹಳ ಇತ್ತು .ಇಂತಹವರ ಅನುಮಾನಗಳಿಗೆ ಮುಕ್ತಾಯ ಹೇಳುವಂತೆ ಶಿವರಾಮಕಾರಂತ, ಬೆಳ್ಳಾವೆ ವೆಂಕಟನಾರಣಪ್ಪ, ಸೇತೂರಾಂ, ಜೆ.ಆರ್.ಲಕ್ಷ್ಮಣರಾವ್, ದೇವರಾಜಸರ್ಕಾರ್, ಡಿ.ರಂಗಯ್ಯ, ಟಿ.ಆರ್. ಅನಂತರಾಮ್, ನಾಗಭೂಷಣರಾವ್, ಸಿಂಧೆ, ಪ್ರಸ್ತುತ ಈ ಲೇಖನದ ಲೇಖಕರು ಹಾಗೂ ಎನ್. ವಾಸುದೇವ್,ಕ.ರಾ ಮೋಹನ್, ಬಿ. ಎಸ್.ಶೈಲಜ,ಇನ್ನೂ ಅನೇಕ ಬರೆಹಗಾರರು ಕನ್ನಡದಲ್ಲಿ ವಿಜ್ಞಾನವನ್ನು ಕುರಿತು ಬರೆದರು. ಕನ್ನಡ ಪತ್ರಿಕೆಗಳಾದ ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಕನ್ನಡಪ್ರಭ, ಉದಯವಾಣಿ ಮೊದಲಾದವು ವಿಜ್ಞಾನದ ಜನಪ್ರಿಯ ಬರೆಹಗಾರರನ್ನು ಬೆಳಕಿಗೆ ತಂದವು, ಕರ್ನಾಟಕ ರಾಜ್ಯವಿಜ್ಞಾನ ಪರಿಷತ್ತು ಕರ್ನಾಟಕದ ಆಕಾಶವಾಣಿಕೇಂದ್ರಗಳು (ವಿಜ್ಞಾನದ ಮುನ್ನಡೆ), ಬೆಂಗಳೂರಿನ ನವಕರ್ನಾಟಕ ಪುಸ್ತಕ ಪ್ರಾಕಾಶನ ಸಂಸ್ಥೆಗಳು ತಮ್ಮನ್ನು ಸಂಪೂರ್ಣವಾಗಿ ಈ ಉದ್ದೇಶದಲ್ಲಿ ತೊಡಗಿಸಿಕೊಂಡಿವೆ; ಕಾಲಕಾಲಕ್ಕೆ ಮೌಲಿಕವಾದ ವಿಜ್ಞಾನ ಕೃತಿಗಳನ್ನು

ಪ್ರಕಟಿಸುತ್ತಲೇ ಇವೆ. ಕರ್ನಾಟಕ ಮಾತೃಭಾಷೆಯಲ್ಲಿ ವಿಜ್ಞಾನಕೃತಿಗಳ ರಚನೆಯು ಆರಂಭದ ಮಜಲು ಅಷ್ಟೆ. ಬೋಧಿಸುವುದು ಮತ್ತು ಕಲಿಯುವುದು ಮುಂದಿನ ಮಜಲುಗಳು; ನಾವು ಇನ್ನೂ ಸಹ ಉಪೇಕ್ಷೆಮಾಡಿರುವುದು ಈ ಮಜಲುಗಳನ್ನು. ಕನ್ನಡದಲ್ಲಿ ವಿಜ್ಞಾನವನ್ನು ಕಲಿತರೆ ಏನು ಲಾಭ? ಕೆಲಸಸಿಗುತ್ತದೆಯೆ? ಕರ್ನಾಟಕ ದಿಂದ ಹೊರರಾಜ್ಯಕ್ಕೆ ಹೋದರೆ ಅಲ್ಲಿ ನಮಗೆ ಯಾರು ಕೆಲಸಕೊಡುತ್ತಾರೆ? ಅಲ್ಲಿ ನಮ್ಮ ಕನ್ನಡವನ್ನು ಯಾರು ಕೇಳುತ್ತಾರೆ? ವಿದೇಶಗಳಿಗೆ ಹೋದರೆ ಅಲ್ಲಿ ನಮ್ಮ ಗತಿಯೇನು ? ಇಂತಹ ಆತಂಕಗಳ ಪ್ರಶ್ನೆಗಳನ್ನು ಕೇಳುತ್ತಿರುವುದು ಸಹಜವೇ ಆಗಿದೆ. ಇದಕ್ಕೆ ಸಮರ್ಪಕವಾದ ಉತ್ತರಗಳನ್ನು ಇಂಗ್ಲಿಷ್ ಭಾಷೆಯನ್ನೇ ಮಾತನಾಡದ ಫ್ರಾನ್ಸ್, ರಷ್ಯ, ಜರ್ಮನಿ, ಜೆಕೊಸ್ಲೊವಾಕಿಯಾ ಜಪಾನ್, ಚೀನಾ ಮೊದಲಾದ ರಾಷ್ಟ್ರಗಳು ನೀಡಿವೆ. ೧೯೮೭ ರಲ್ಲಿ ಪ್ರಪಂಚದ ವಿಶ್ವವಿದ್ಯಾನಿಲಯ ಮತ್ತು ಕಾಲೇಜು ಮಹಾ ಒಕ್ಕೂಟಗಳ (FISE) ಅಂತಾರಾಷ್ಟ್ರೀಯ ಅಧಿವೇಶನವು ರಷ್ಯಾದಲ್ಲಿ ನಡೆಯಿತು. ಇದರಲ್ಲಿ ಭಾಗವಹಿಸಲು ಕಳುಹಿಸಿದ್ದ ಭಾರತೀಯ ಅಧ್ಯಾಪಕರ ನಿಯೋಗದಲ್ಲಿ ನಾನೂ ಓರ್ವನಾಗಿದ್ದೆ. ಪ್ರಾಗ್ (ಪ್ರಹ) ನಗರದಲ್ಲಿ ನಡೆದ ವಿಚಾರಸಂಕಿರಣದಲ್ಲಿ ನಮ್ಮ ಆಂಧ್ರ ಪ್ರದೇಶದ ಪ್ರತಿನಿಧಿ ಅಧ್ಯಾಪಕರು " ಇಂಗ್ಲಿಷ್ ಭಾಷೆಯೇ ಗೊತ್ತಿಲ್ಲದ ನೀವು ಹೇಗೆ ವಿಜ್ಞಾನ ಮೊದಲಾದ ವಿಷಯಗಳನ್ನು ಕುರಿತು ಬರೆಯುತ್ತೀರಿ? ಬೋಧಿಸುತ್ತೀರಿ? ಕಲಿಸುತ್ತೀರಿ?" ಎಂದು ಪ್ರಶ್ನೆಹಾಕಿದರು. ಆಗ ಇಡೀ ಸಭೆಯು ಉತ್ತರಕೊಟ್ಟಂತೆ ಆ ಸಭಾಮಂದಿರ ಕಂಪಿಸುವಂತೆ ಮೇಜುಗಳನ್ನು ಕುಟ್ಟುತ್ತಾ ನಕ್ಕರು. ಆಗ ಸಂಚಾಲಕರು ಕೊಟ್ಟ ಉತ್ತರವನ್ನು ಇಲ್ಲಿ ಸ್ಮರಿಸಬೇಕಾಗಿದೆ:" ಯೂರೋಪಿನಲ್ಲಿ ಸುಮಾರು ಅರವತ್ತೆಂಟು ಪ್ರಮುಖ ಭಾಷೆಗಳಿವೆ, ಇವೆಲ್ಲವನ್ನೂ ಕಲಿಯಲು ಆಯಸ್ಸು ಎಲ್ಲಿದೆ? ಆದ್ದರಿಂದ ನಮ್ಮ ನಮ್ಮ ಮಾತೃಭಾಷೆಯಲ್ಲಿ ಬೋಧಿಸುತ್ತೇವೆ, ಕಲಿಯುತ್ತೇವೆ, ಬರೆಯುತ್ತೇವೆ! ನಮಗೆ ಬೇಕಾದ ಪುಸ್ತಕಗಳು ಪ್ರಪಂಚದ ಯಾವುದೇ ಭಾಷೆಯಲ್ಲಿರಲಿ, ಸಮರ್ಪಕ ಭಾಷಾಂತರಕಾರರ ನೆರವಿನಿಂದ ಆದಷ್ಟು ಬೇಗ ನಮ್ಮ ಮಾತೃಭಾಷೆಗೆ ಭಾಷಾಂತರ ಮಾಡಿಕೊಳ್ಳುತ್ತೇವೆ". ಮುಂದುವರಿದ ದೇಶಗಳು ಸಾಗುತ್ತಿರುವುದು ಈ ವಿವೇಕದ ಪಥದಲ್ಲಿ . ಆ ದೇಶಗಳ ಶಿಕ್ಷಣ ತಜ್ಞರು ಒಮ್ಮತದಿಂದ ಮೇಲಿನ ಅಭಿಪ್ರಾಯವನ್ನು ಒಪ್ಪಿ ನಡೆದಿದ್ದಾರೆ. ಆದ್ದರಿಂದ, ಅವರು ವಿಜ್ಞಾನಕ್ಷೇತ್ರದಲ್ಲಿ ಅಸಾಧಾರಣ ಸಾಧನೆಗಳನ್ನು ಮಾಡಲು ಸಾಧ್ಯವಾಗಿದೆ. ಭಾರತವನ್ನು ಒಟ್ಟು ಇಂಗ್ಲಿಷರು ಹೋದರು; ಆದರೆ ಇಂಗ್ಲಿಷ್ ಭಾಷೆಯನ್ನು ಬಿಟ್ಟರೆ ನಮಗೆ ಗತಿಯಿಲ್ಲವೆಂದು ನಾವು ಇನ್ನೂ ಭ್ರಮೆಯಲ್ಲಿದ್ದೇವೆ. ಎಲೆಕ್ಟ್ರಾನಿಕ್ಸ್ ಕಂಪ್ಯೂಟರ್ ಮೊದಲಾದ ವಿಷಯಗಳು ಚಲಾವಣೆಗೆ ಬಂದ ಮೇಲಂತೂ ನಮ್ಮ ಇಂಗ್ಲಿಷ್ ಮೋಹವು ಜಾಸ್ತಿಯಾಗುತ್ತಿದೆ. ನಮ್ಮ ಚೀನೀ ಭಾಷೆಗೆ ಇವೆಲ್ಲವನ್ನೂ ಅಳವಡಿಸಿಕೊಂಡಿದ್ದೇವೆ ಎಂದು ಇತ್ತೀಚೆಗೆ ಚೀನಾದೇಶದ ಮಂತ್ರಿಗಳೋರ್ವರು ಹೆಮ್ಮೆಯಿಂದ ಪತ್ರಿಕಾ ಸಂದರ್ಶನದಲ್ಲಿ ಆಡಿದ್ದಾರೆ. ಕನ್ನಡಿಗರು ಈ ಸಾಧನೆ ಮಾಡಬೇಕಾಗಿದೆ; ಅವರು ಜಾಗೃತರಾಗಬೇಕಾಗಿದೆ.

**ವಿಷಯ ಗ್ರಹಿಕೆಗೆ ಅಡ್ಡಿ:** ಇಂಗ್ಲಿಷ್ ಭಾಷೆ ನಮ್ಮದಲ್ಲದ ಭಾಷೆ. ವಿಜ್ಞಾನ ದಿಂದ ಹಿಡಿದು ಎಲ್ಲ ಜ್ಞಾನಗಳ ಬೋಧನೆಯನ್ನು ಶಾಲಾಕಾಲೇಜುಗಳಲ್ಲಿ ಕಲಿಸುವ

ಬರೆಯುವುದು ಬೋಧಿಸುವುದು ಕಲಿಯುವುದು ಸಹ ಕೆಲವರ ಕಮಿಟ್‌ಮೆಂಟ್ ಆದರೆ, ಹಲವು ಸಮಯಸಾಧಕರ ಅವಕಾಶವಾದಿಗಳ ವ್ಯಾಪಾರವಾಗಿಬಿಡುತ್ತದೆ.

ಕನ್ನಡದಲ್ಲಿ ವಿಜ್ಞಾನದ ಪುಸ್ತಕಗಳನ್ನು ಬರೆಯುವ, ಪಾಠಹೇಳುವ ಮತ್ತು ಕಲಿಯುವ ಒಲವು ಅಲ್ಲಲ್ಲಿ ಕಾಣುತ್ತಿದೆ. ಪದವಿ ಮತ್ತು ಸ್ನಾತಕೋತ್ತರ ಪದವಿ ಪರೀಕ್ಷೆಗಳಲ್ಲಿ ಕನ್ನಡೇತರ ವಿಷಯಗಳನ್ನು ಕೂಡಾ ಕನ್ನಡದಲ್ಲಿ ಬರೆಯುವ ಅವಕಾಶಗಳನ್ನು ಕರ್ನಾಟಕರಾಜ್ಯದಲ್ಲಿರುವ ವಿಶ್ವವಿದ್ಯಾನಿಲಯಗಳು ಕಲ್ಪಿಸಿವೆ. ಈ ದಾರಿಯಲ್ಲಿ ಹಲವು ವಿದ್ಯಾರ್ಥಿಗಳು ನಡೆದಿದ್ದಾರೆ. ಸುಲಭವಾಗಿ ಉತ್ತೀರ್ಣರಾಗಬಹುದೆಂಬ ಉದ್ದೇಶವು ಇದರ ಹಿಂದೆ ಇರುವುದು ಸಹಜವೇ ಆಗಿದೆ; ಈ ತೊಡಗಿಸಿಕೊಳ್ಳುವ ಪ್ರಕ್ರಿಯೆಯು ಪಾಸುಮಾಡುವ ಮಿತಿಗೆ ನಿಂತು ಬಿಡಬಾರದು, ಅದು ಸೃಜನಾತ್ಮಕ ಪ್ರಕ್ರಿಯೆಗಳಲ್ಲಿ ತೊಡಗಬೇಕು.

ವಿಷಯವು ಇಂಗ್ಲಿಷ್ ಅಥವಾ ಕನ್ನಡ ಹಾಗೂ ಯಾವುದೇ ಭಾಷೆಗಳಲ್ಲಿರಲಿ, ವಿಷಯಕ್ಕೆ ಅನುಗುಣವಾಗಿ ಸಂಕೀರ್ಣವಾಗಿಯೋ ಸರಳವಾಗಿಯೋ ಇರುತ್ತದೆ. ಮಾತೃಭಾಷೆಗೆ ಬಂದಾಗ ಸಂಕೀರ್ಣವಾದ ವಿಷಯವು ಸರಳವಾಗಿಬಿಡುವುದಿಲ್ಲ. ಹಾಗೇನಾದರೂ ಅಂದುಕೊಂಡರೆ ಅದು ತಪ್ಪು ಗ್ರಹಿಕೆ ಅಷ್ಟೆ. ವ್ಯಾಕರಣ, ಭಾರತೀಯ ಕಾವ್ಯಮೀಮಾಂಸೆ, ಛಂದಸ್ಸುಶಾಸ್ತ್ರ, ಹಳಗನ್ನಡಕಾವ್ಯ ಮೊದಲಾದವು ಕನ್ನಡ ಭಾಷೆಯಲ್ಲಿವೆ, ಆದರೂ ಅದರ ಗ್ರಹಿಕೆ ಸರಳಸುಲಭವಲ್ಲ. ಅದಕ್ಕಾಗಿ ಪರಿಶ್ರಮವನ್ನು ಪಡಬೇಕು, ಮಾತೃಭಾಷೆಯಲ್ಲಿ ಶಿಕ್ಷಣ ನಡೆದಾಗ, ಭಾಷೆಯ ತೊಡಕಿಲ್ಲದೆ ವಿಷಯವು ಅತ್ಯಂತ ಕಡಿಮೆ ಅವಧಿಯಲ್ಲಿ ನೇರವಾಗಿ ಗ್ರಹಿಕೆಯು ಕಡೆ ಹರಿಯುತ್ತದೆ ಎಂಬುದೇ ಮುಖ್ಯಸಂಗತಿಯಾಗಿದೆ. ಕನಿಷ್ಠಕಾಲಾವಧಿಯಲ್ಲಿ ಹೆಚ್ಚು ಜ್ಞಾನವನ್ನು ಆಳವಾಗಿ, ಖಚಿತವಾಗಿ ಕಲಿಸಲು ಹಾಗೂ ಕಲಿಯಲು ಮಾತೃಭಾಷೆಯ ಬಳಕೆಯಿಂದ ಮಾತ್ರ ಸಾಧ್ಯ.

**ವಿಜ್ಞಾನದ ಭಾಷೆ:** ಕನ್ನಡದಲ್ಲಿ ವಿಜ್ಞಾನದ ಕೃತಿಗಳನ್ನು ರಚಿಸಲು ಸಾಧ್ಯವಿಲ್ಲ, ಕಷ್ಟ, ಪಾರಿಭಾಷಿಕ ಪದಗಳಲ್ಲಿ ಎಂಬ ಮಾತುಗಳನ್ನು ಕೇಳುತ್ತಲೇ ಇದ್ದೇವೆ, ಈ ವರೆಗೂ ಕನ್ನಡದಲ್ಲಿ ಬಂದಿರುವ ವಿಜ್ಞಾನದ ಎಲ್ಲಪುಸ್ತಕಗಳು ಬೋಧನೆ ಅಭ್ಯಾಸಗಳಿಗೆ ಸಮರ್ಪಕವಾಗಿವೆಯೆಂದು ನಿಖರವಾಗಿ ಹೇಳುವಂತಿಲ್ಲ. ಕನ್ನಡದಲ್ಲಿ ಸೃಜನಶೀಲ ಸಾಹಿತ್ಯವನ್ನು ರಚಿಸುವುದಕ್ಕಿಂತ ವಿಜ್ಞಾನದ ಕೃತಿಗಳನ್ನು ಬರೆಯುವುದು ಕಷ್ಟವೆಂದು ನನ್ನ ಅನುಭವ ಹೇಳುತ್ತದೆ. ಈ ಕಷ್ಟಕ್ಕೆ ಕಾರಣ ನಮಗೆ ನಮ್ಮದೇ ಆದ ವಿಜ್ಞಾನದ ಭಾಷೆ ಇಲ್ಲದಿರುವುದು; ಕನ್ನಡದಲ್ಲಿ ನಾವು ತತ್ವಶಾಸ್ತ್ರ, ವೇದಾಂತ, ಮೀಮಾಂಸೆಗಳಿಗೆ ತಕ್ಕ ಭಾಷೆಯನ್ನು ರೂಪಿಸಿಕೊಂಡಂತೆ ವಿಜ್ಞಾನದ ಭಾಷೆಯೆಂದರೆ ಇಂದಿಗೂ ನಮಗೆ ಇಂಗ್ಲಿಷ್ ಭಾಷೆ ಮಾತ್ರ ಆಗಿದೆ; ನಮ್ಮ ಜಾಯಮಾನಕ್ಕೆ ಒಗ್ಗದ, ಆಲೋಚನೆಗೆ ಬಾರದ ಇಂಗ್ಲಿಷ್ ಭಾಷೆಗೆ, ಹುಲ್ಲುಕಡ್ಡಿಗೆ ಜೋತುಬಿದ್ದಂತೆ ಹಿಡಿದುಕೊಂಡಿದ್ದೇವೆ, ಮುಳುಗುತ್ತಿದ್ದರೂ ತೇಲುತ್ತಿರುವ ಭ್ರಮೆಯಲ್ಲಿದ್ದೇವೆ.

**ಪಾರಿಭಾಷಿಕಪದಗಳು:** ವಿಜ್ಞಾನದ ಭಾಷೆ ಎಂದ ಕೂಡಲೆ ಅದರ ರೂಪಾಂಶದಲ್ಲಿ

ಮೊದಲು ಕಾಣುವುದು ಪಾರಿಭಾಷಿಕ ಪದಗಳು. ಅಂತಾರಾಷ್ಟ್ರೀಯ ಪಾರಿಭಾಷಿಕ ಪದಗಳನ್ನು (ಇಂಟರ್ ನ್ಯಾಷನಲ್ ಟೆಕ್ನಿಕಲ್ ವರ್ಡ್ಸ್)ಮಾತೃಭಾಷೆಗೆ ಅನುವಾದ ಮಾಡಲೇ ಬಾರದು, ಇದು ನನ್ನ ಖಚಿತವಾದ ಅಭಿಪ್ರಾಯ ಹಾಗೂ ತೀರ್ಮಾನ. ಅವನ್ನೆಲ್ಲ ಸಾಧ್ಯವಾದಷ್ಟು ಕನ್ನಡಾನುವಾದ ಮಾಡಲೇಬೇಕೆಂಬ ಹಠವಿದೆ. ಅಂತಾರಾಷ್ಟ್ರೀಯ ಪಾರಿಭಾಷಿಕ ಪದಗಳಿಗೆಲ್ಲ ಕನ್ನಡದಲ್ಲಿ ಸಂವಾದಿ ಪದಗಳಿಲ್ಲ, ಆದ್ದರಿಂದ ಜ್ಞಾತಿ ಭಾಷೆಗಳಿಗೆ, ಸಂಸ್ಕೃತ ಮೊದಲಾದ ಭಾರತೀಯ ಭಾಷೆಗಳಿಗೆ ಹೋಗಿ ಹುಡುಕಿ ಎಂದು ಕೆಲವು ವಿದ್ವಾಂಸರ ಸಲಹೆ. ಹಾಗೆ ಮಾಡಿದಾಗ ಪದಗಳು ದೊರಕಬಹುದು ಅಥವಾ ಸೃಷ್ಟಿಸಲೂಬಹುದು. ಅಷ್ಟೆಲ್ಲಾ 'ಸರ್ಕಸ್' ಮಾಡಿ ತಯಾರು ಮಾಡಿದ ವಿಜ್ಞಾನದ ಭಾಷೆಯಿಂದ ಅನುಕೂಲ ಕಡಿಮೆ. ಏಕೆಂದರೆ ವಿಷಯವನ್ನು ಗ್ರಹಿಸುವ ತೊಡಕು ಇಂಗ್ಲಿಷ್ ಭಾಷೆಯಲ್ಲಿದ್ದಂತೆ ಕನ್ನಡದಲ್ಲೂ ಆಗುತ್ತದೆ. ಈಗಾಗಲೇ ಅದರ ಅನುಭವ ಆಗುತ್ತಿದ್ದೆಯಷ್ಟೆ. ಸಮರ್ಥವೂ ಶ್ರೀಮಂತವೂ ಆದ ವಿಜ್ಞಾನದ ಭಾಷೆಯನ್ನು ಕನ್ನಡದಲ್ಲಿ ರೂಪಿಸುವ ಮೊದಲ ಹಂತವೆಂದರೆ ಅಂತಾರಾಷ್ಟ್ರೀಯವಾಗಿ ಚಲಾವಣೆಯಲ್ಲಿರುವ ಪಾರಿಭಾಷಿಕ ಪದಗಳನ್ನು ಅವುಗಳ ಯಥಾ ರೂಪದಲ್ಲಿಯೇ ಬಳಸಬೇಕು:

ಡೈಮಂಡ್, ರೂಬಿ, ಎಮರಾಲ್ಡ್‌ಗಳು, ಜೆಮ್‌ಸ್ಟೋವ್‌ಗಳು, ವೊಲ್ಕಾವೇಗಳು ಅಪಾಯಕಾರಿ, ರಾಕೆಟ್‌ಗಳ ಯುಗ.

(ಇಂತಹ ವಾಕ್ಯಗಳು ಕೈಲಾಸಂ ಕನ್ನಡವನ್ನು ಹೋಲುತ್ತವೆ, ಓದಲು ಅಸಹಜ ವೆನಿಸುತ್ತವೆ ಎಂದು ಕೆಲವು ಸ್ನಾತಕೋತ್ತರ ತರಗತಿಯ ಪ್ರಾಧ್ಯಾಪಕರು ನನ್ನಲ್ಲಿ ಮೂರುದಶಕಗಳ ಹಿಂದೆ ಹೇಳಿದ್ದು ಉಂಟು).

ಹೀಗೆ ಪಾರಿಭಾಷಿಕಪದಗಳನ್ನು ಮೂಲರೂಪದಲ್ಲಿಯೇ ಉಳಿಸಿಕೊಂಡು, ಅದರ ಅರ್ಥಶಕ್ತಿಯನ್ನು ಹೆಚ್ಚಿಸಲು, ವಿವರಣೆ ನೀಡುವಾಗ ಕನ್ನಡ ಪದಗಳನ್ನು ಅನಿವಾರ್ಯವೆಂದ ಕಡೆ ಮಾತ್ರ ಬಳಸಬೇಕು. ಹಾಗೆ ಮಾಡದೆ, ಪಾರಿಭಾಷಿಕಪದಗಳನ್ನು ಪಲ್ಲಟಮಾಡಿ ಅದರ ಸ್ಥಾನದಲ್ಲಿ ದೇಶೀಪದಗಳನ್ನು ಬಳಸಬಾರದು: ಟ್ರೈನ್, ರೈಲ್ವೆಸ್ಟೇಷನ್, ಬಸ್‌ಸ್ಟಾಂಡ್, ಹೊಟೆಲ್, ಹಾಸ್ಪಿಟಲ್, ಕಾಲೇಜ್, ಕ್ಲಬ್,ರೋಡ್, ಮಾರ್ಕೆಟ್, ಆಫೀಸ್, ಬ್ಯಾಂಕ್, ಇಂಜಕ್ಷನ್, ಟೊಮಾಟೊ, ಕಾರ್, ಬಸ್ ಮೊದಲಾದವು ವ್ಯಾಪಕವಾಗಿ ಬಳಕೆಯಾಗಿರುವ ಇಂಗ್ಲಿಷ್ ಪದಗಳು; ಆದರೆ ಇವು ಕನ್ನಡಪದಗಳು ಎನ್ನುವಂತೆ ನಮ್ಮ ಭಾಷೆಯಲ್ಲಿ ಹೊಂದಿಕೊಂಡುಬಿಟ್ಟಿವೆ. ಇಂತಹ ಪದಗಳಿಗೆ ನಾವು ಕನ್ನಡ ಭಾಷೆಯ ಸಂವಾದಿ ಪದಗಳನ್ನು ಬಳಸಬಾರದು. ರೈಲ್ವೆಸ್ಟೇಷನ್‌ಗೆ ಉಗಿಬಂಡಿ ನಿಲ್ದಾಣ ವೆಂದು ಹೇಳುವುದು ಅನವಶ್ಯಕ.

ಇದೇ ಮಾದರಿಯಲ್ಲಿ ನಾವು ಪಠ್ಯಪುಸ್ತಕಗಳಲ್ಲಿ ಅಂತಾರಾಷ್ಟ್ರೀಯ ಪಾರಿಭಾಷಿಕ ಪದಗಳನ್ನು ಹಾಗೆಯೇ ಉಳಿಸಿಕೊಂಡು, ಉಚ್ಚಾರಣೆ ಮತ್ತು ಬರೆವಣಿಗೆಯಲ್ಲಿ ಬಳಸಬೇಕು. ಆರಂಭದಲ್ಲಿ ಇದು ಕಿರಿಕಿರಿ ಉಂಟುಮಾಡಿದರೂ ಸಹ, ಕ್ರಮೇಣಬಳಸುತ್ತಾ ಹೋದಂತೆ ನಮ್ಮ ಕನ್ನಡದ ಪದಗಳೇ ಆಗಿಬಿಡುತ್ತವೆ. ಹಾಗೆ ಮಾಡುವುದರಿಂದ ಕನ್ನಡದಲ್ಲಿ ವಿಜ್ಞಾನಪದಗಳ ಸಂಪತ್ತನ್ನು ವಿಪುಲ ಮಾಡಿದಂತಾಗುತ್ತದೆ. ಪಾರಿಭಾಷಿಕಪದಗಳನ್ನು ಮಾತು

ಮತ್ತು ಬರೆವಣಿಗೆಯಲ್ಲಿ ಚಲಾವಣೆ ಮಾಡುತ್ತಲೇ ಹೋದಾಗ ಒಂದಲ್ಲ ಒಂದು ದಿನ ಅವು ಎಲ್ಲರಿಗೂ ಚಿರಪರಿಚಿತವಾಗಿ ಸರ್ವೇಸಾಮಾನ್ಯ ಪದಗಳಾಗಿ, ಕನ್ನಡ ಭಾಷಾ ಹಂದರದಲ್ಲಿ ಐಕ್ಯವಾಗಿ ಬಿಡುತ್ತವೆ. ಅನ್ಯದೇಶೀಯಪದಗಳೆಂದು ಗುರುತು ಹಿಡಿಯಲಾರದ ಮಟ್ಟಕ್ಕೆ ಸಹಜತೆಯನ್ನು ಪಡೆದಿರುತ್ತವೆ.

ಅಲ್ಲಿಗೆ ಪಾರಿಭಾಷಿಕಪದಗಳ ಕೊರತೆಯನ್ನು ಪರಿಹರಿಸಿಕೊಂಡಾಯ್ತು. ಇನ್ನು ಉಳಿದಿರುವ ಸಮಸ್ಯೆ ಬರೆಹ ಮತ್ತು ಬೋಧನೆಯ ಹಂತದಲ್ಲಿ .

**ಕನ್ನಡದಲ್ಲಿ ವಿಜ್ಞಾನದ ಬರೆಹ ಮತ್ತು ಬೋಧನೆ:** ಅಂತಾರಾಷ್ಟ್ರೀಯ ಪಾರಿಭಾಷಿಕ ಪದಗಳನ್ನು ಯಥಾರೂಪದಲ್ಲಿ ಬಳಸಿಕೊಂಡು ವಿಜ್ಞಾನದ ವಿಷಯಗಳನ್ನು ಕನ್ನಡ ಭಾಷೆಯಲ್ಲಿ ವಿವರಿಸಬೇಕು. ಶಾಲಾಕಾಲೇಜುಗಳಲ್ಲಿ ಪ್ರಾಕ್ಟಿಕಲ್ ತರಗತಿಯಲ್ಲಿ ಈಗ ಬೋಧಿಸುತ್ತಿರುವುದು ಇದೇ ಮಾದರಿಯಲ್ಲಿ. ಒಮ್ಮೆ ಇಂಗ್ಲಿಷ್‌ನಲ್ಲಿ ವಿವರ ಕೊಡುವ ಅಧ್ಯಾಪಕರು, ಅನಂತರ ಅರ್ಥವಾಗದ ವಿದ್ಯಾರ್ಥಿಗೆ ಕೊಡುವ ವಿವರಗಳು ಇಂಗ್ಲಿಷ್ ಮತ್ತು ಕನ್ನಡದಲ್ಲಿ ಇರುವುದನ್ನು ಗಮನಿಸಬೇಕು.

*ಟೆಸ್ಟ್‌ಟ್ಯೂಬ್‌ಗೆ ಹಾಕಿಕೊಂಡಿರುವ ಆಸಿಡ್ ಅನ್ನು ಬುನ್‌ಸನ್‌ಬನರ್ವರಿಂದ ಒಂದೆರಡು ನಿಮಿಷ ಕಾಯಿಸಿರಿ, ಚೇಂಜಸ್ ಅನ್ನು ಅಬ್ಸರ್ವ್‌ಮಾಡಿ, ಕಲರ್ಸ್‌ಅನ್ನು ನೋಟ್ ಮಾಡಿಕೊಳ್ಳಿ.

*ಆ ಹೂನಲ್ಲಿರುವ ಪೆಟಲ್ಸ್ ಎಷ್ಟು, ಕೆಲಿಕ್ಸ್ ಎಷ್ಟು, ಸ್ಟಿಪ್ಯೂಲ್ಸ್ ನೋಡಿ ಆ ಪ್ಲಾಂಟ್‌ನಲ್ಲಿ ,ವರ್ಟಿಕಲ್ ಆಗಿ ಒಂದು ಸಾರಿ, ಹಾರಿಜಾಂಟಲ್ ಆಗಿ ಮತ್ತೊಮ್ಮೆ ಕಟ್‌ಮಾಡಿ.

*ಸೆವೆನ್‌ಟೀನ್ ಡಿಗ್ರಿಸ್ ಈಸ್ಟ್‌ಗೆ ಒಂದು ಲೈನ್ ಡ್ರಾ ಮಾಡಿ. ಅದನ್ನು ಕಟ್ ಮಾಡುವಂತೆ ಮತ್ತೊಂದು ಲೈನ್‌ಅನ್ನು ಫಾರ್‌ಟಿಟೂ ಡಿಗ್ರಿಸ್‌ನಲ್ಲಿ ಸೌತ್‌ವೆಸ್ಟ್‌ಗೆ ಡ್ರಾ ಮಾಡಿ.

*ಸೆಲ್ಸ್ ಅರೆಂಜ್‌ಮೆಂಟನ್ನು ಇನ್ನೂ ಕ್ಲಿಯರ್ ಆಗಿ ಬರೆಯಿರಿ.

*ನಿಮ್ಮ ಕ್ಯಾಲುಕ್ಲೇಶನ್ ಎಲ್ಲ ಸ್ಟೆಪ್ಸ್‌ಗಳಲ್ಲಿ ರಾಂಗ್ ಆಗಿದೆ.

ನಾನು ಇಲ್ಲಿ ಬಳಸಿರುವುದು ಸಾಧಾರಣವಾದ ಕೆಲವು ವಾಕ್ಯಗಳು ಅಷ್ಟೆ. ಉನ್ನತ ಶಿಕ್ಷಣದ ವಿಷಯಗಳನ್ನು ಕುರಿತು ಕನ್ನಡ ಮಾತನಾಡುವ ಇಬ್ಬರು ವಿದ್ವಾಂಸರು ಮೇಲಿನಂತೆಯೇ ಎರಡು ಭಾಷೆಗಳ ಮಿಶ್ರಣ ಮಾಡಿ ಮಾತನಾಡುತ್ತಿರುವುದನ್ನು ನಾನು ಕೇಳಿದ್ದೇನೆ.

ವಿಜ್ಞಾನ ವಿಷಯಗಳಲ್ಲಿರುವ ಕ್ರಿಯಾತ್ಮಕ ಅಂಶಗಳನ್ನು ಕನ್ನಡ ಭಾಷೆಯಲ್ಲಿ ಮೇಲೆ ಹೇಳಿದಂತೆ ವಿವರಿಸಬಹುದು. ಇದು ಸಹಜವೆನ್ನುವಂತೆ ನಡೆಯುವ ಭಾಷಾಪ್ರಕ್ರಿಯೆ ಆಗಬೇಕು. ವ್ಯಾವಹಾರಿಕ ಮಟ್ಟದಲ್ಲಿ ಇದು ತ್ವರಿತಗತಿಯಲ್ಲಿ ಆಗುತ್ತದೆ. ವಿಜ್ಞಾನದ

ವಸ್ತುವೊಂದರ ಉಪಯೋಗ ಮತ್ತು ತಾಂತ್ರಿಕ ವಿವರಗಳನ್ನು ಒಬ್ಬ ಯಶಸ್ವಿ ಸೇಲ್ಸ್‌ಮನ್ ಜನಸಾಮಾನ್ಯ ಗ್ರಾಹಕರಿಗೆ ಅರ್ಥವಾಗುವ ಭಾಷೆಯಲ್ಲಿ ತಿಳಿಸುತ್ತಾನೆ. ಇಂತಹ ಯತ್ನವು ಶಿಕ್ಷಣವಲಯದಲ್ಲಿರುವ ಬೋಧಕರು ಮತ್ತು ಕಲಿಯಲು ಸಿದ್ಧವಿರುವ ವಿದ್ಯಾರ್ಥಿಗಳ ಹಂತದಲ್ಲಿ ನಿರಂತರವಾಗಿ ನಡೆಯಬೇಕು. ಹಾಗಾದಾಗ ಕನ್ನಡದಲ್ಲಿ ವಿಜ್ಞಾನವನ್ನು ಬರೆಯುವ, ಬೋಧಿಸುವ, ಕಲಿಯುವ ಸಮಸ್ಯೆಗಳು ಇಲ್ಲವಾಗುತ್ತವೆ.

ವಿಜ್ಞಾನದ ವಿಷಯಗಳನ್ನು ಕನ್ನಡದಲ್ಲಿ ಕಲಿಸಲು ತೊಡಕು ಆಗುತ್ತದೆ ಎಂದು ದೂರು ಹೇಳುತ್ತಾರೆ. ಇದು ಅಂತಹವರ ಅಸಾಮರ್ಥ್ಯದ ವಾದ. ಆರಂಭದ ವರ್ಷದ ಹಂತಗಳಲ್ಲಿ ಇಂಗ್ಲಿಷ್ ಭಾಷೆಯಲ್ಲಿರುವ ವಿಜ್ಞಾನದ ವಿಷಯವನ್ನು ಓದಿ ಮನನ ಮಾಡಿಕೊಂಡು, ಅನಂತರ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ಮಿಶ್ರಣದಿಂದ ಬೋಧಿಸುತ್ತೇವೆ. ಭಾಷಾಮಡಿವಂತಿಕೆ ಇಲ್ಲಿ ಮುಖ್ಯವಲ್ಲ. ಕೇಳುವವರ ಮನಸ್ಸಿಗೆ ಕಲಿಸುತ್ತಿರುವ ವಿಚಾರವನ್ನು ಸ್ಪಷ್ಟಪಡಿಸಬೇಕೆಂಬುದೇ ಮುಖ್ಯಗುರಿಯಾಗಿರುತ್ತದೆ. ಆರಂಭದ ಹಂತದಲ್ಲಿ ಅನಿಸುವ ಈ ಭಾಷೆಗಳ ಮಿಶ್ರ ಪ್ರಯೋಗದ ಗೊಂದಲ, ಅಸಹಜತೆ, ಸಂದೇಹಗಳು ಕ್ರಮೇಣ ಗೌಣವಾಗಿ ಬಿಡುತ್ತವೆ. ಅಂತಾರಾಷ್ಟ್ರೀಯ ಪಾರಿಭಾಷಿಕ ಪದಗಳು ಬಳಕೆಯಿಂದ ಸವಕಲಾಗಿ ಬಿಟ್ಟು ಕನ್ನಡದಪದಗಳಾಗಿ ಬಿಡುತ್ತವೆ. ಹೀಗೆ ಭಾಷೆಯ ಸಮಸ್ಯೆಯಿಂದ ಮುಕ್ತನಾಗಿ ಬೋಧಿಸಲು ಹೊರಡುವ ಅಧ್ಯಾಪಕ ಸೃಜನಶೀಲ ಮನಸ್ಸಿನಿಂದ ವಿಜ್ಞಾನದ ವಿಷಯವನ್ನು ಸ್ಫುಟಗೊಳಿಸುತ್ತಾ ಹೋಗಬಹುದು. ಇಂಗ್ಲಿಷ್‌ಭಾಷೆಯಲ್ಲಿರುವ ವಿಷಯವು ಚೆನ್ನಾಗಿ ಮನನವಾದ ಮೇಲೂ ಸಹ, ಪಾರಿಭಾಷಿಕ ಪದಗಳಿಗೆಲ್ಲ ಕನ್ನಡ ರೂಪ ಕೊಟ್ಟು ಬಳಸುವುದನ್ನು ಬಿಡಬೇಕು. ಇಂಗ್ಲಿಷ್‌ನಲ್ಲಿ ಯೋಚಿಸುತ್ತಾ, ಮನಸ್ಸಿನಲ್ಲಿ ಕನ್ನಡಾನುವಾದ ಮಾಡುತ್ತ ಕನ್ನಡದಲ್ಲಿ ಕಲಿಸುವುದನ್ನು, ಬರೆಯುವುದನ್ನು ಕೈಬಿಡಬೇಕು. ಮನಸ್ಸಿನಲ್ಲಿ ಉಂಟಾಗುವ ಇಂತಹ ತೊಡರುಗಳಿಂದ ಸಂಪೂರ್ಣವಾಗಿ ಮುಕ್ತರಾಗಬೇಕು, ಇಲ್ಲವಾದರೆ ಕನ್ನಡ ಭಾಷಾಮಾಧ್ಯಮದಲ್ಲಿ ವಿಜ್ಞಾನದ ಬೋಧನೆ, ಬರೆವಣಿಗೆ ಹಾಗೂ ಅಭ್ಯಾಸ ಅಸಾಧು ಎನಿಸದೆ ಇರದು.

## ಸಂಪಾದಕರ / ಲೇಖಕರ ವಿಳಾಸಗಳು

### ಸಂಪಾದಕರು


ಡಾ. ಚಕ್ಕೆರೆ ಶಿವಶಂಕರ್
ನಂ. ೨೧, ಋಷ್ಯ
ಕವಿ ಕೇಶಿರಾಜ ರಸ್ತೆ
೧೦ನೇ ಎ, ಕ್ರಾಸ್
ಶ್ರೀನಗರ- ೫೬೦೦೫೦

ಪ್ರೊ. ಜಿ. ಅಬ್ದುಲ್ ಬಷೀರ್
ಕನ್ನಡ ಪ್ರಾಧ್ಯಾಪಕರು ಮತ್ತು
ವಿಭಾಗದ ಮುಖ್ಯಸ್ಥರು
ಆಚಾರ್ಯ ಪಾಠಶಾಲಾ ಕಲೆ ಮತ್ತು
ವಿಜ್ಞಾನ ಪದವಿ ಕಾಲೇಜು
ಬೆಂಗಳೂರು - ೫೬೦೦೧೯


### ಲೇಖಕರು


೧. ಡಾ. ಟಿ. ಗೋವಿಂದರಾಜು
ಎಂ. ಎಫ್. ೩೨/೮
ನಂದಿನಿ ಬಡಾವಣೆ
ಬೆಂಗಳೂರು-೫೬೦೦೯೬

೨. ಡಾ. ಸಿ. ನಾಗಭೂಷಣ
ಅಧ್ಯಾಪಕರು
ಕನ್ನಡ ಅಧ್ಯಯನ ವಿಭಾಗ
ಸ್ನಾತಕೋತ್ತರ ಕೇಂದ್ರ
ಯರಗೇರಾ,
ರಾಯಚೂರು-೫೮೪೧೩೩

೩. ಪ್ರೊ. ಜಿ. ಅಬ್ದುಲ್ ಬಷೀರ್
ನಂ. ೭, ೧ನೇ ಮಹಡಿ
ಕುಟ್ಟಿ ಕಾಲೋನಿ, ಲಾಲ್‌ಬಾಗ್
ಸಿದ್ದಾಪುರ, ಜಯನಗರ
೧ನೇ ಬ್ಲಾಕ್
ಬೆಂಗಳೂರು-೫೬೦೦೧೧

೪. ಪ್ರೊ. ವಸಂತ ಕುಷ್ಟಗಿ
ಎಂ. ಐ. ಜಿ. ೨೬
ಆದರ್ಶನಗರ, ೧ನೇ ಹಂತ
ಕಲಬುರಗಿ-೫೮೫೧೦೫

೫. ಡಾ. ವಿಜಯಶ್ರೀ ಸಬರದ
'ಬಸವಶ್ರೀ', ಸರಸ್ವತಿಪುರ
ವಿಶ್ವವಿದ್ಯಾಲಯ ಅಂಚೆ
ಗುಲ್ಬರ್ಗಾ - ೫೮೫೧೦೬

೬. ಡಾ. ಬಸವರಾಜ ಸಬರದ
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಗುಲ್ಬರ್ಗಾ ವಿಶ್ವವಿದ್ಯಾಲಯ
ಗುಲ್ಬರ್ಗಾ - ೫೮೫೧೦೬

೭. ಶ್ರೀಮತಿ ಪಾರ್ವತಿ ಜಿ. ಐತಾಳ್
ಭಂಡಾರ್ಕರ್ಸ್ ಕಾಲೇಜು
ಕುಂದಾಪುರ-೫೭೬೨೦೧

೮. ಶ್ರೀ ಟಿ. ಯಲ್ಲಪ್ಪ
ಕನ್ನಡ ಉಪನ್ಯಾಸಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಬಂಗಾರಪೇಟೆ, ಕೋಲಾರ ಜಿಲ್ಲೆ

೯. ಡಾ. ನಾಗರಾಜ್ ನೀರಗುಂದ
ಕನ್ನಡ ಪ್ರಾಧ್ಯಾಪಕರು
ನಂ. ೧೬, ೧೧ನೆಯ ಅಡ್ಡರಸ್ತೆ
ರಾಘವೇಂದ್ರ ಲೇಔಟ್
ಪದ್ಮನಾಭನಗರ,
ಬೆಂಗಳೂರು-೫೬೦೦೭೦

## ಗದ್ಯಾನುವಾದಗಳು

೧. ಆದಿಮಹಾಕವಿ ಪಂಪನ, ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತ.
-ಅನು: ಎನ್. ಅನಂತರಂಗಾಚಾರ್ — ೧೫೦-೦೦

೨. ಪಂಪನ ಆದಿಪುರಾಣ -ಅನು: ಕೆ. ಎಲ್. ನರಸಿಂಹಶಾಸ್ತ್ರೀ — ೧೨೦-೦೦

೩. ಶಿವಕೋಟ್ಯಾಚಾರ್ಯನ, ವಡ್ಡಾರಾಧನೆ -ಅನು: ಟಿ. ಕೇಶವಭಟ್ಟ — ೭೫-೦೦

೪. ದುರ್ಗಸಿಂಹನ, ಕರ್ಣಾಟಕ ಪಂಚತಂತ್ರ
-ಅನು: ಗುಂಡ್ಮಿಚಂದ್ರಶೇಖರ ಐತಾಳ — ೭೦-೦೦

೫. ಕವಿ ರನ್ನನ, ಸಾಹಸಭೀಮ ವಿಜಯ ಅಥವಾ ಗದಾಯುದ್ಧ
-ಅನು: ಆರ್. ವಿ. ಕುಲಕರ್ಣಿ — ೪೫-೦೦

೬. ಜನ್ನಕವಿಯ, ಯಶೋಧರ ಚರಿತೆ
-ಅನು: ತೆಕ್ಕುಂಜ ಗೋಪಾಲಕೃಷ್ಣಭಟ್ಟ — ೨೫-೦೦

೭. ರಾಘವಾಂಕನ, ಸಿದ್ಧರಾಮ ಚಾರಿತ್ರ
-ಅನು: ಆರ್. ಎಸ್. ರಾಮರಾಯರು — ೫೦-೦೦

೮. ಸಂಚಿಹೊನ್ನಮ್ಮನ ಹದಿಬದೆಯ ಧರ್ಮ
-ಅನು: ವೆನ್. ರಂಗನಾಥ ಶರ್ಮಾ — ೨೦-೦೦

೯. ಲಿಂಗಣ್ಣ ಕವಿಯ ಕೆಳದಿ ನೃಪವಿಜಯ
-ಅನು: ಕೆಳದಿ ಗುಂಡಾಜೋಯಿಸ್ — ೬೦-೦೦

೧೦. ಆಂಡಯ್ಯ ಕವಿಯ ಕಬ್ಬಿಗರ ಕಾವಂ
-ಅನು: ಆರ್. ವಿ. ಕುಲಕರ್ಣಿ — ೨೦-೦೦

೧೧. ತಿರುಮಲಾರ್ಯನ ಚಿಕ್ಕದೇವರಾಯ ವಂಶಾವಳಿ
-ಅನು: ಮ. ಭಾ. ಭೋಯಿ — ೨೫-೦೦

೧೨. ಸಂಸ್ಕೃತ ಜೈಮಿನಿಯ, ಜೈಮಿನಿ ಭಾರತ
-ಅನು: ಕಡಬದ ನಂಜುಂಡಶಾಸ್ತ್ರಿ, ಎನ್. ರಂಗನಾಥ ಶರ್ಮಾ — ೭೦-೦೦

೧೩. ಚಾಮರಸನ ಪ್ರಭುಲಿಂಗಲೀಲೆ
-ಅನು: ಡಾ. ಎಸ್. ವಿದ್ಯಾಶಂಕರ — ೭೫-೦೦

೧೪ ಹರಿಹರನ ಗಿರಿಜಾ ಕಲ್ಯಾಣ ಮಹಾಪ್ರಬಂಧ
-ಅನು: ಎಂ. ಜಿ. ನಂಜುಂಡಾರಾಧ್ಯ — ೭೫-೦೦

೧೫. ರುದ್ರಭಟ್ಟನ ಜಗನ್ನಾಥ ವಿಜಯ
-ಅನು: ಎಂ. ಆರ್ ವರದಾಚಾರ್ಯ — ೧೨೦-೦೦

೧೬. ನಾಗವರ್ಮನ ಕರ್ನಾಟಕ ಕಾದಂಬರಿ
-ಅನು: ಹ. ವೆಂ. ನಾರಾಯಣ ಶಾಸ್ತ್ರೀ — ೧೦೦-೦೦

೧೭. ಕಮಲಭವನ ಶ್ರೀ ಶಾಂತೀಶ್ವರ ಪುರಾಣ
-ಅನು: ಆರ್.ವಿ. ಕುಲಕರ್ಣಿ — ೪೦-೦೦

೧೮. ಕನಕದಾಸರ ಹರಿಭಕ್ತಿಸಾರ
-ಅನು: ವಿದ್ವಾನ್ ವೆನ್. ರಂಗನಾಥ ಶರ್ಮಾ — ೧೫-೦೦

೧೯. ಸೋಮೇಶ್ವರ ಶತಕ — ೨೫-೦೦

೨೦. ಬಸವಪ್ಪ ಶಾಸ್ತ್ರಿಗಳ ದಮಯಂತೀ ಸ್ವಯಂವರ
-ಅನು: ಕೆ. ಆರ್. ಲಕ್ಷ್ಮೀಕಾಂತಯ್ಯ — ೨೫-೦೦

೨೧. ಷಡಕ್ಷರದೇವನ ಶಬರಶಂಕರ ವಿಳಾಸಂ
-ದಿಬ್ಬೂರು ಶ್ರೀನಿವಾಸರಾವ್ — ೩೫-೦೦

೨೨. ನೇಮಿನಾಥ ಪುರಾಣಂ
-ಆರ್. ವಿ. ಕುಲಕರ್ಣಿ — ೮೦-೦೦

## ಇತರ ಪ್ರಕಟಣೆಗಳು

೨೩. ದಿನಕರನ ಚೌಪದಿ – ದಿನಕರ ದೇಸಾಯಿ — ೧೨೦-೦೦

೨೪. ರಂಗಣ್ಣನ ಕನಸಿನ ದಿನಗಳು – ಎಂ. ಆರ್. ಶ್ರೀನಿವಾಸಮೂರ್ತಿ — ೬೦-೦೦

೨೫. ಸತ್ಯಕಾಮರ ಕಥೆಗಳು – ಸತ್ಯಕಾಮ — ೨೫-೦೦

೨೬. ಗ್ರೀಕ್ ಮಿಥಕಗಳು – ಕೆ. ಎಂ. ಸೀತರಾಮಯ್ಯ — ೧೨೦-೦೦

೨೭. ಪಂಚಮವೇದ – ಅನು. ಗುರುಮೂರ್ತಿ ಪೆಂಡಕೂರು — ೩೦-೦೦

೨೮. ಶಬ್ದಾರ್ಥ ಮರುಮಂಥನ –ಎಚ್. ವಿ. ಶ್ರೀನಿವಾಸಶರ್ಮ — ೨೫-೦೦



"ಪ್ರಸ್ತುತ ಸಂಚಿಕೆಯ ಲೇಖನಗಳಲ್ಲಿ ಜಾನಪದದ ಬಗ್ಗೆ ಹೊಸಚಿಂತನೆಗಳು, ಕನ್ನಡ ನಾಡಿನ ರಾಜರ ಭಾಷೆ-ಸಾಹಿತ್ಯ-ಸಂಸ್ಕೃತಿ ಅಭಿಮಾನ, ಕವಿಗಳ ಅಭಿವ್ಯಕ್ತಿ ಮಾಧ್ಯಮ ಪ್ರೀತಿ, ಹರಿದಾಸರು ಕನ್ನಡ ಸಾಹಿತ್ಯದ ಮೇಲೆ ಬೀರಿರುವ ಪ್ರಭಾವ, ಹೊಸಗನ್ನಡ ಸಾಹಿತ್ಯದ ಎರಡು ಶಿಖರಗಳ ಸಾಹಿತ್ಯ ಸೇವೆಯ ವಿಮರ್ಶಾತ್ಮಕ ಪರಿಚಯ, ಪಾಶ್ಚಿಮಾತ್ಯರ ವಸಾಹತುಶಾಹಿ ಧೋರಣೆ, ಅಧಿಕಾರ ಶಾಹಿ ಪ್ರತಿನಿಧಿ, ಅರಸ ಮತ್ತು ಜನಪ್ರತಿನಿಧಿ; ಕವಿಹೃದಯದ ಮಂತ್ರಿವರ್ಯರ ನಡುವಿನ ಸಂಘರ್ಷ, ಕನ್ನಡ ಬರೆಹ, ಬೋಧನೆ, ಕಲಿಕೆಯ ಬಗ್ಗೆ ನವೀನ ಚಿಂತನೆಗಳು ಇವೆ.

ಸಂಪಾದಕರು